| | | |
|---|---|---|
| Name | : | **Islam Endarenu** |
| Author | : | **M.M. Akbar** |
| Publishers | : | DAWA PUBLICATIONS<br>Affiliated to Jamiate Ahle Hadees Karnataka Goa<br>Hira Complex, 2nd Block,<br>Katipalla, Mangalore - 575 030.<br>Mob : 9986282449<br>E-mail : asshahadat@yahoo.co.in |
| Printers | : | **Pixel Designers**<br>Mangalore |
| Copy | : | **Ist March 2007 (1000 Copies)**<br>**IInd April 2008 (1000 Copies)**<br>**IIIrd April 2009 (2000 Copies)**<br>**IVth March 2012 (2000 Copies)** |
| Price | : | **Rs. 20/-** |

# ಪ್ರಕಾಶಕರ ಮಾತು

ಇಸ್ಲಾಮ್ ಎಂದರೇನು? ಎಂಬ ಈ ಕೃತಿ ಧರ್ಮಗಳ ಕುರಿತು ತುಲನಾತ್ಮಕ ಅಧ್ಯಯನ ನಡೆಸುವ ಸಹೋದರ, ಸಹೋದರಿಯರಿಗೆ ಒಂದು ಉಪಯುಕ್ತ ಕೈಪಿಡಿ. ಮುರಿದ ಮಾನವ ಹೃದಯಗಳನ್ನು ಬೆಸೆಯಲು ಕೂಡಾ ಇದು ಸಹಕಾರಿ. ಶಾಂತಿ ಮತ್ತು ನೆಮ್ಮದಿಗಾಗಿ ಹಪಹಪಿಸುತ್ತಿರುವ ಮಾನವನ ಮನಸ್ಸಿನ ದಾಹವನ್ನು ಇಂಗಿಸಲು ಇದು ಪರ್ಯಾಪ್ತವಿದೆ.

ಜಗತ್ತಿನಲ್ಲಿ ಶಾಂತಿ ಸ್ಥಾಪನೆಯಾಗಲಿ ಎನ್ನುವುದು ಪ್ರತಿಯೊಬ್ಬ ಮನುಷ್ಯನ ಬಯಕೆಯಾಗಿದೆ. ಅದೇ ಪ್ರಕಾರ ಮರಣೋತ್ತರ ಜೀವನದಲ್ಲಿ ಮುಕ್ತಿ ದೊರಕಲೆನ್ನುವುದು ಪ್ರತಿಯೊಬ್ಬರ ಅಭಿಲಾಷೆಯೂ ಆಗಿದೆ. ಆದರೆ ಈ ಬೇಡಿಕೆಗಳ ಈಡೇರಿಕೆಗಾಗಿ ದೈವಿಕ ಗ್ರಂಥಗಳ ಬೆಳಕಿನಲ್ಲಿ ನಮ್ಮ ವಿಶ್ವಾಸ ಮತ್ತು ಕರ್ಮಗಳನ್ನು ಸರಿಪಡಿಸಿಕೊಳ್ಳುವುದು ಅತ್ಯಾವಶ್ಯಕವಾಗಿದೆ.

ದಾವಾ ಪಬ್ಲಿಕೇಷನ್ ಇಸ್ಲಾಮಿನ ಕುರಿತು ಅನ್ಯಮತೀಯರಲ್ಲಿರುವ ತಪ್ಪು ಕಲ್ಪನೆಗಳನ್ನು ನಿವಾರಿಸುವ ಮತ್ತು ಇಸ್ಲಾಮಿನ ನೈಜ ಆಶಯ ಆದರ್ಶಗಳನ್ನು ಪರಿಚಯಿಸುವ ನಿಟ್ಟಿನಲ್ಲಿ "ಇಸ್ಲಾಮ್ ಎಂದರೇನು?", "ದೇವನ ನೈಜ ಧರ್ಮ" "ಮುಕ್ತಿಯ ಮಾರ್ಗ" ಮತ್ತು "ಹಿಂದೂ, ಕ್ರೈಸ್ತ ಮತ್ತು ಇಸ್ಲಾಮ್ ಧರ್ಮಗಳಲ್ಲಿ ದೇವರು" ಎಂಬ ಕೃತಿಗಳನ್ನು ಪ್ರಕಟಿಸಿದೆ. "ಇಸ್ಲಾಮ್ ಎಂದರೇನು?" ಎಂಬ ಈ ಕೃತಿಯ 4ನೇ ಆವೃತ್ತಿ ಇದೀಗ ಬೆಳಕು ಕಾಣುತ್ತಿದೆ. "ನಿನ್ನ ಮೂಲಕ ಒಬ್ಬನು ಸತ್ಯ ಮಾರ್ಗವನ್ನು ಸ್ವೀಕರಿಸಿದರೆ ಅದು ನಿನ್ನ ಮಟ್ಟಿಗೆ ಈ ಲೋಕ ಮತ್ತು ಅದರಲ್ಲಿರುವ ಸರ್ವ ವಸ್ತುಗಳಿಗಿಂತಲೂ ಉತ್ತಮ" ಎನ್ನುವ ಪ್ರವಾದಿ ಮುಹಮ್ಮದ್(ಸ)ರವರ ವಚನವೇ ಇದಕ್ಕೆ ಪ್ರೇರಕ.

ಈ ಕೃತಿಯನ್ನು ಬೆಳಕಿಗೆ ತರಲು ಪ್ರತ್ಯಕ್ಷವಾಗಿ ಮತ್ತು ಪರೋಕ್ಷವಾಗಿ ಸಹಕರಿಸಿದ ಎಲ್ಲಾ ಸಹೋದರರನ್ನು ಕೃತಜ್ಞತಾ ಪೂರ್ವಕವಾಗಿ ಸ್ಮರಿಸುತ್ತೇವೆ. ಎಲ್ಲರಿಗೂ ಅಲ್ಲಾಹನು ಸತ್ಫಲವನ್ನು ನೀಡಲಿ. ಸತ್ಪಥದಲ್ಲಿ ಮುನ್ನಡೆಸಲಿ.

**ದಾವಾ ಪಬ್ಲಿಕೇಶನ್ಸ್**

(ಜಮೀಯತೇ ಅಹ್ಲೆ ಹದೀಸ್ ಕರ್ನಾಟಕ-ಗೋವಾ ಇದರ ಮಾನ್ಯತೆ ಪಡೆದಿದೆ)

ಹಿರಾ ಕಾಂಪ್ಲೆಕ್ಸ್, 2ನೇ ಬ್ಲಾಕ್, ಕಾಟಿಪಳ್ಳ, ಮಂಗಳೂರು- 575 030

Mob : 9986282449. E-mail : asshahadat@yahoo.co.in

’ನಿನ್ನ ಮೂಲಕ ಒಬ್ಬನು ಸತ್ಯಮಾರ್ಗವನ್ನು ಸ್ವೀಕರಿಸಿದರೆ, ಅದು ನಿನ್ನ ಮಟ್ಟಿಗೆ ಈ ಲೋಕ ಮತ್ತು ಅದರಲ್ಲಿರುವ ಎಲ್ಲಾ ವಸ್ತುಗಳಿಗಿಂತಲೂ ಉತ್ತಮ’ (ಪ್ರವಾದಿ ಮುಹಮ್ಮದ್ (ಸ)

ಪ್ರಭೂ........... ಇದು ಸತ್ಯಧರ್ಮದ ಸಂದೇಶ ಪ್ರಚಾರಕ್ಕಾಗಿರುವ ವಿನೀತ ಪ್ರಯತ್ನವಾಗಿದೆ. ನೀನು ವಹಿಸಿಕೊಟ್ಟಿರುವ ಹೊಣೆಗಾರಿಕೆಯನ್ನು ನಿರ್ವಹಿಸುವ ನಿಟ್ಟಿನಲ್ಲಿರುವ ಪುಟ್ಟ ಶ್ರಮ. ನೀನು ಇದನ್ನು ಪ್ರತಿಫಲಾರ್ಹವಾದ ಕಾರ್ಯವಾಗಿ ಸ್ವೀಕರಿಸು (ಆಮೀನ್).

**ದೈವಿಕ ಧರ್ಮವನ್ನಲ್ಲದೆ ಅವರು ಬೇರೊಂದು ಧರ್ಮವನ್ನು ಬಯಸುತ್ತಿರುವರೋ? ಆಕಾಶ -ಭೂಮಿಯಲ್ಲಿರುವುದೆಲ್ಲವೂ ಅನುಸರಣೆಯೊಂದಿಗೆ ಇಲ್ಲವೇ ನಿರ್ಬಂಧಿತವಾಗಿ ಅವನಿಗೆ ಶರಣಾಗಿವೆ (ಇಸ್ಲಾಮ್ ಸ್ವೀಕರಿಸಿದೆ) ಆತನೆಡೆಗೇ ಅವರು ಮರಳಿಸಲ್ಪಡುವರು**

**(ಖುರ್‌ಆನ್ 3 83)**

**ಇಸ್ಲಾಮ್ ಎಂದರೇನು?**

ಇಸ್ಲಾಮ್ ಎಂಬ ಅರಬಿ ಶಬ್ದಕ್ಕೆ 'ಸಮರ್ಪಣೆ' ಹಾಗೂ 'ಶಾಂತಿ' ಎಂಬ ಅರ್ಥಗಳಿವೆ. ತನ್ನ ಜೀವನವನ್ನು ಸರ್ವಲೋಕಗಳ ಸೃಷ್ಟಿಕರ್ತನಿಗೆ ಸಮರ್ಪಿಸುವ ಮೂಲಕ ಕರಗತವಾಗುವ ಶಾಂತಿಯೇ ಇಸ್ಲಾಮ್. ಜೀವನದ ಪ್ರತಿಯೊಂದು ಕ್ಷೇತ್ರಗಳಲ್ಲಿ ದೈವಿಕ ವಿಧಿ - ನಿಷೇಧಗಳ ಪ್ರಕಾರ ಶಿಸ್ತುಬದ್ಧಗೊಳಿಸುವುದು ಇಸ್ಲಾಮಿನ ವಿವಕ್ಷೆಯಾಗಿದೆ.

**ಇಸ್ಲಾಮಿನ ಸ್ಥಾಪಕನು ಯಾರು?**

ಮನುಷ್ಯನಿಗೆ ಬುದ್ಧಿ, ವಿವೇಕ ಹಾಗೂ ಒಳಿತು -ಕೆಡುಕುಗಳನ್ನು ಬೇರ್ಪಡಿಸಿ ತಿಳಿಯುವ ಸಾಮರ್ಥ್ಯವನ್ನು ದಯಪಾಲಿಸಿ ಭೂಮಿಯ ಮೇಲೆ ನಿಯೋಗಿಸಿದ ಸೃಷ್ಟಿಕರ್ತನೇ ಅವರು ಜೀವನದ ವಿವಿಧ ರಂಗಗಳಲ್ಲಿ ಪಾಲಿಸಬೇಕಾದ ವಿಧಿ-ನಿಷೇಧಗಳನ್ನು ಕಲಿಯಲು ಅಗತ್ಯವಾಗಿರುವ ವ್ಯವಸ್ಥೆಯನ್ನು ಮಾಡಿಟ್ಟಿದ್ದಾನೆ. ಅದಕ್ಕಾಗಿ ಅವನು ಪ್ರವಾದಿಗಳನ್ನು ನಿಯೋಗಿಸಿದನು. ವಿಭಿನ್ನ ಕಾಲಾವಧಿಯಲ್ಲಿ ಬೇರೆ ಬೇರೆ ಸಮುದಾಯದಲ್ಲಿ ಆಗತರಾದ ಪ್ರವಾದಿಗಳೆಲ್ಲರೂ ಸೃಷ್ಟಿಕರ್ತನ ವಿಧಿ ನಿಷೇಧಗಳ ಪ್ರಕಾರ ಜೀವಿಸಬೇಕೆಂದು ಕಲಿಸಿಕೊಟ್ಟರು. ಅವರೆಲ್ಲರೂ ಸರ್ವಶಕ್ತನಿಗೆ ಸಂಪೂರ್ಣ ಸಮರ್ಪಿಸಿಕೊಳ್ಳಬೇಕು. ಅಥವಾ ಮುಸ್ಲಿಮರಾಗಬೇಕೆಂಬ ಆದರ್ಶವನ್ನು ಉಪದೇಶಿಸಿದರು. ಅವರ ಉಪದೇಶಗಳೆಲ್ಲವೂ ದೈವಿಕವಾಣಿಯ ತಳಹದಿಯಲ್ಲಿತ್ತು. ದೇವ ಸಮರ್ಪಣೆಯ ಆದರ್ಶವೇ ಇಸ್ಲಾಮ್. ಅದು ಯಾವೊಬ್ಬ ವ್ಯಕ್ತಿಯೂ ಸ್ಥಾಪಿಸಿದ ಧರ್ಮವಲ್ಲ. ಅದನ್ನು ಸೃಷ್ಟಿಕರ್ತನು ತನ್ನ ಸಂದೇಶವಾಹಕರ ಮೂಲಕ ಪ್ರಸ್ತುತಪಡಿಸಿದ.

**ಹೇಳಿರಿ : ಅಲ್ಲಾಹನಲ್ಲಿ ಮತ್ತು ನಮಗೆ ಅವತೀರ್ಣಗೊಳಿಸಲ್ಪಟ್ಟದರಲ್ಲಿ ಇಬ್ರಾಹೀಮ್, ಇಸ್ಮಾಯಿಲ್, ಇಸ್ಹಾಕ್, ಯಅ್‌ಕೂಬ್ ಸಂತತಿಗಳು ಇವರಿಗೆ ಅವತೀರ್ಣವಾದುವುಗಳಲ್ಲಿ, ಮೂಸಾರಿಗೂ ಈಸಾರಿಗೂ ಇತರ ಪ್ರವಾದಿಗಳಿಗೂ ನೀಡಲ್ಪಟ್ಟವುಗಳಲ್ಲಿ ನಾವು ವಿಶ್ವಾಸವಿಟ್ಟಿದ್ದೇವೆ. ಅವರಲ್ಲಿ ಯಾರ ಮಧ್ಯೆಯೂ ನಾವು ತಾರತಮ್ಯ ಕಲ್ಪಿಸುವುದಿಲ್ಲ. ನಾವು ಅಲ್ಲಾಹನಿಗೆ ಶರಣಾದವರಾಗಿದ್ದೇವೆ (ಮುಸ್ಲಿಮರಾಗಿದ್ದೇವೆ)**

**ಖುರ್‌ಆನ್ 3:84**

**ಮುಸ್ಲಿಮನು ಯಾರು?**

ಮುಸ್ಲಿಮ್ ಎಂದರೆ ತನ್ನನ್ನು ಸೃಷ್ಟಿಕರ್ತನಿಗೆ ಸಮರ್ಪಿಸಿದವನೆಂದರ್ಥ. ದೇವನ ವಿಧಿ ನಿಷೇಧಗಳ ಪ್ರಕಾರ ಜೀವನವನ್ನು ರೂಪಿಸುವವನು ಮುಸ್ಲಿಮನು. ಜನನದ ಆಧಾರದ ಮೇಲಲ್ಲ. ಬದಲಾಗಿ, ಒಬ್ಬನು ವಿಶ್ವಾಸ ಹಾಗೂ ಕರ್ಮದ ಆಧಾರದಲ್ಲಿ ಮುಸ್ಲಿಮನಾಗುತ್ತಾನೆ.

ಓರ್ವ ಮುನ್ನೆಚ್ಚರಿಕೆಗಾರನು ಬಂದಿರದ ಸಮುದಾಯವಿಲ್ಲ" (ಖುರ್‌ಆನ್ 35 : 24)

**ಒಬ್ಬನಿಗೆ ಮುಸ್ಲಿಮನಾಗಲು ಹೇಗೆ ಸಾಧ್ಯ?**

ಒಬ್ಬನು ಅಲ್ಲಾಹನಲ್ಲದೆ ಬೇರೆ ಆರಾಧ್ಯರಿಲ್ಲ; ಪ್ರವಾದಿ ಮುಹಮ್ಮದ್ (ಸ)ರು ಅಲ್ಲಾಹನ ಸಂದೇಶವಾಹಕರೆಂದು ಉಚ್ಚರಿಸಿ ಅದಕ್ಕನುಸಾರ ಜೀವನವನ್ನು ರೂಪಿಸಿಕೊಳ್ಳುತ್ತೇನೆಂದು ಪ್ರತಿಜ್ಞೆಗೈದರೆ ಅವನು ಮುಸ್ಲಿಮನಾಗುತ್ತಾನೆ.

**'ಜನರೇ ನಿಮ್ಮನ್ನೂ ನಿಮ್ಮ ಪೂರ್ವಿಕರನ್ನೂ ಸೃಷ್ಟಿಸಿದ ನಿಮ್ಮ ಪ್ರಭುವನ್ನು ಆರಾಧಿಸಿರಿ. ನೀವು ಭಯಭಕ್ತಿಯುಳ್ಳವರರಾಗಲಿಕ್ಕಾಗಿ, ಆತನು ನಿಮಗೆ ಭೂಮಿಯನ್ನು ಹಾಸಿಗೆಯನ್ನಾಗಿಯೂ ಆಕಾಶವನ್ನು ಮೇಲ್ಛಾವಣಿಯಾಗಿಯೂ ಮಾಡಿದ ಮೇಲ್ಭಾಗದಿಂದ ಮಳೆ ಸುರಿಸಿ ಅದರ ಮೂಲಕ ನಿಮಗೆ ತಿನ್ನಲು ಯೋಗ್ಯವಾದ ಕಾಯಿಪಲ್ಲೆಗಳನ್ನು ಉತ್ಪಾದಿಸಿದ. ಆದುದರಿಂದ ನೀವು ತಿಳಿದವರಾಗಿದ್ದುಕೊಂಡು ಅಲ್ಲಾಹನಿಗೆ ಪಾಲುದಾರರನ್ನು ನಿಶ್ಚಯಿಸದಿರಿ.**

**(ಖುರ್‌ಆನ್ 2 : 21, 22)**

**ಇಸ್ಲಾಮ್ ಕಠಿಣವೆಂದು ಭಾಸವಾಗಲು ಏನು ಕಾರಣ?**

ಪ್ರವಾದಿಗಳು ಇಸ್ಲಾಮನ್ನು ಆರಾಧನಾಲಯಗಳ ಗೋಡೆಗಳ ನಡುವೆ ಸೀಮಿತವಾಗಿರುವ ಧರ್ಮವೆಂದು ಕಲಿಸದೆ, ಅವರು ಅದನ್ನು ಜೀವನದ ಪ್ರತಿಯೊಂದು ಕ್ಷೇತ್ರಗಳಲ್ಲಿ ಅನುಸರಿಸಬೇಕಾದ ವಿಧಿ-ನಿಷೇಧಗಳನ್ನೊಳಗೊಂಡ ಧರ್ಮವಾಗಿದೆಯೆಂದು ಕಲಿಸಿದರು. ಮುಸ್ಲಿಮ್ ಎಂದರೆ ತನ್ನನ್ನು ಸೃಷ್ಟಿಕರ್ತನಿಗೆ ಸಮರ್ಪಿಸಿದವನು ಎಂದರ್ಥ. ಆದುದರಿಂದ ಮುಸ್ಲಿಮನು ದೈವಿಕ ಮಾರ್ಗದರ್ಶನವನ್ನು ಸ್ವೀಕರಿಸುವ ಕಾರ್ಯದಲ್ಲಿ ಯಾವುದೇ ರಾಜಿಗೆ ಸಿದ್ಧನಿಲ್ಲ. ಆರಾಧನಾಲಯಗಳಲ್ಲಿ ಮಾತ್ರ ದೇವ ಪ್ರಜ್ಞೆ ಹಾಗೂ ಜೀವನದಲ್ಲಿ ತನ್ನಿಚ್ಛೆಯಂತೆ ಕಾರ್ಯವೆಸಗಬಹುದೆಂಬ 'ಧರ್ಮ ಸಂಕಲ್ಪ'ವು ಇಸ್ಲಾಮಿಗೆ ಅಪರಿಚಿತವಾಗಿರುವುದರಿಂದ ಪ್ರತಿಯೊಂದು ರಂಗದಲ್ಲಿ ಇಸ್ಲಾಮಿನ ವಿಧಿ ನಿಷೇಧಗಳನ್ನು ಕಟ್ಟುನಿಟ್ಟಾಗಿ ಪಾಲಿಸುವವನೇ ನೈಜ ಮುಸ್ಲಿಮ್.

**ಇಸ್ಲಾಮಿನ ವಿಶ್ವಾಸಗಳು ಯಾವುದು?**

ಏಕದೇವ, ಅವನ ಮಲಕ್‌ಗಳು, ದೈವಿಕ ಗ್ರಂಥಗಳು, ಪ್ರವಾದಿಗಳು, ಮರಣಾನಂತರ ಜೀವನ ಹಾಗೂ ದೇವವಿಧಿಯ ಮೇಲಿನ ವಿಶ್ವಾಸ ಇವುಗಳು ಇಸ್ಲಾಮಿನ ಮೂಲಭೂತ ವಿಶ್ವಾಸಗಳಾಗಿವೆ.

**ಏಕದೇವ ವಿಶ್ವಾಸದಿಂದ ಏನು ಅರ್ಥವಾಗುತ್ತದೆ?**

ಈ ಪ್ರಪಂಚದ ಚರಾಚರ ವಸ್ತು, ಎಲ್ಲಾ ಪ್ರತಿಭಾಸಗಳ ಸೃಷ್ಟಿಕರ್ತ ಹಾಗೂ ಪರಿಪಾಲಕನಾದ ಅಲ್ಲಾಹನು ತನ್ನ ಸತ್ತೆ, ಗುಣ ಮತ್ತು ಪ್ರವೃತ್ತನೆಯಲ್ಲಿ ಏಕನು ಮತ್ತು ಅದ್ವಿತೀಯನಾಗಿದ್ದಾನೆ. ಸರ್ವಶಕ್ತ ಸರ್ವೋನ್ನತ ಹಾಗೂ ಸ್ವಯಂ ಸಂಪೂರ್ಣನಾದ ಅವನನ್ನು ಮಾತ್ರ ಆರಾಧಿಸಬೇಕು. ಇಸ್ಲಾಮ್ ಸೃಷ್ಟಿಕರ್ತನಾದ ಓರ್ವ ದೇವನಿದ್ದಾನೆಂದು ವಿಶ್ವಾಸವಿರಿಸಬೇಕೆಂದು ಹೇಳಿ ವಿರಮಿಸದೆ, ಪರಮ ಕರುಣಾಳುವೂ ಸರ್ವಜ್ಞನೂ ಆದ ಅವನಿಗೆ ಮಾತ್ರ ಪ್ರಾರ್ಥನೆ, ಆರಾಧನೆ, ಹರಕೆಗಳು ಸಲ್ಲಿಸಲ್ಪಡುವ ಪರಿಸ್ಥಿತಿ ಸಂಜಾತಗೊಳ್ಳುವಂತೆ ಮಾಡುತ್ತದೆ.

**ಅಲ್ಲಾಹನು ಯಾರು?**

ಸರ್ವಲೋಕ ಸೃಷ್ಟಿಕರ್ತನಾದ ಏಕದೇವನನ್ನು ಅರಬಿ ಭಾಷೆಯಲ್ಲಿ ಅಲ್ಲಾಹ್ ಎಂದು ಸಂಬೋಧಿಸಲಾಗುತ್ತದೆ. 'ಅಲ್ಲಾಹ್' ಎಂಬ ಪದದ ಭಾಷಾರ್ಥ. 'ಎಲ್ಲಾ ವಿಧದ ಆರಾಧನೆಗಳಿಗೆ ಅರ್ಹನಾದವನು' ಎಂದಾಗಿದೆ. ಅರಬ್ ರಾಷ್ಟ್ರಗಳಲ್ಲಿ ವಾಸಿಸುತ್ತಿರುವ ಮುಸ್ಲಿಮೇತರರು ಕೂಡಾ ಏಕದೇವನನ್ನು ಅಲ್ಲಾಹ್ ಎಂದೇ ಕರೆಯುತ್ತಾರೆ. ಇದು ಲಿಂಗಬೇಧವಾಗಲೀ ಬಹುವಚನ ಪ್ರಯೋಗವಾಗಲೀ ಇಲ್ಲದ ನಾಮವಾಗಿದೆ. ಇದು ದೇವನ ಮಹಾನತೆಯನ್ನು ಪೂರ್ಣವಾಗಿ ಪ್ರತಿಫಲಿಸುವಂತೆ ಮಾಡುವ ಶಬ್ಧವಾಗಿದೆ. ಇತರ ಭಾಷೆಗಳಲ್ಲಿ ಇದಕ್ಕೆ ಸಮಾನವಾದ ಪದಗಳಿಲ್ಲ. ಆದುದರಿಂದ ಮುಸ್ಲಿಮರು ಸೃಷ್ಟಿಕರ್ತನನ್ನು ಅಲ್ಲಾಹ್ ಎಂದೇ ಕರೆಯುತ್ತಾರೆ. ಏಕದೇವನನ್ನು ಅವನ ಪರಿಶುದ್ಧತೆ ಮತ್ತು ಮಹಾನತೆಗೆ ತಕ್ಕುದಾದ ಯಾವ ನಾಮದಲ್ಲಿಯೂ ಕರೆಯಬಹುದೆನ್ನುವುದು ಇಸ್ಲಾಮಿನ ದೃಷ್ಟಿಕೋನವಾಗಿದೆ.

**ಮಲಕ್‌ಗಳು ಯಾರು?**

ಮಲಕ್‌ಗಳು ಮನುಷ್ಯನಿಗೆ ತನ್ನ ಸಾಮಾನ್ಯ ನೆಲೆಯಲ್ಲಿರುವ ಇಂದ್ರಿಯ ಜ್ಞಾನದಿಂದ ಅರಿತುಕೊಳ್ಳಲು ಅಥವಾ ಅನುಭವಿಸಲು ಸಾಧ್ಯವಿಲ್ಲದ ಪ್ರಕಾಶದಿಂದ ಸೃಷ್ಟಿಸಲ್ಪಟ್ಟ ದೇವನ ದಾಸರಾಗಿದ್ದಾರೆ. ಅವರು ಬೇರೆ ಬೇರೆ ದೌತ್ಯಕ್ಕಾಗಿ ನಿಯುಕ್ತಗೊಂಡವರಾಗಿದ್ದು, ಅಲ್ಲಾಹನನ್ನು ಧಿಕ್ಕರಿಸುವ ಸಾಮರ್ಥ್ಯ ಅವರಿಗಿಲ್ಲ.

**ದೈವಿಕ ಗ್ರಂಥಗಳು ಎಂದರೇನು?**

ಮಾನವನು ಹೇಗೆ ಜೀವಿಸಬೇಕೆಂದು ಕಲಿಸಲು ನಿಯುಕ್ತರಾದ ಪ್ರವಾದಿಗಳಿಗೆ ದೇವನು ಅವತೀರ್ಣಗೊಳಿಸಿದ ಮಾರ್ಗದರ್ಶನ ಗ್ರಂಥಗಳಿಗೆ ದೈವಿಕ ಗ್ರಂಥಗಳು ಎನ್ನಲಾಗುತ್ತದೆ. ಇವುಗಳು ಇಹ-ಪರ ಜೀವನದ ಸಾಫಲ್ಯಕ್ಕೆ ಅಗತ್ಯವಾಗಿರುವ ದೈವಿಕ ಮಾರ್ಗದರ್ಶನಗಳ ಸಮಾಹಾರವಾಗಿದೆಯೆಂದು ಹೇಳಬಹುದು. ಅಂತಿಮ ದೈವಿಕ ಗ್ರಂಥವಾದ ಪವಿತ್ರ ಕುರ್‌ಆನ್ ನಾಲ್ಕು ದೈವಿಕ ಗ್ರಂಥಗಳ ಕುರಿತು ಪರಿಚಯಿಸಿದೆ. ಅವುಗಳು ಯಾವುದೆಂದರೆ, ಪ್ರವಾದಿ ಮೂಸಾ (ಅ) ರವರಿಗೆ ಅವತೀರ್ಣವಾದ ತೌರಾತ್, ದಾವೂದ (ಅ)ರಿಗೆ ಅವತೀರ್ಣವಾದ ಝುಬೂರ್, ಪ್ರವಾದಿ ಈಸಾ (ಅ) ರಿಗೆ ಅವತೀರ್ಣವಾದ ಇಂಜೀಲ್, ಮುಹಮ್ಮದ್ (ಸ)ರಿಗೆ ಅವತೀರ್ಣವಾದ ಕುರ್‌ಆನ್. ಈ ಗ್ರಂಥಗಳು ಮಾತ್ರವಲ್ಲದೆ, ಇನ್ನೂ ಹಲವಾರು ಪ್ರವಾದಿಗಳಿಗೆ ದೈವಿಕ ಗ್ರಂಥಗಳು ಅವತೀರ್ಣಗೊಂಡಿತ್ತೆಂದು ಕುರ್‌ಆನ್ ಸ್ಪಷ್ಟಪಡಿಸುತ್ತದೆ. ಪ್ರಸ್ತುತ ಗ್ರಂಥಗಳೆಲ್ಲವೂ ಮಾನವನನ್ನು ದುರ್ಮಾರ್ಗದಿಂದ ಮುಕ್ತಗೊಳಿಸಿ ಸನ್ಮಾರ್ಗದೆಡೆಗೆ ಕೊಂಡೊಯ್ಯಲು ಸೃಷ್ಟಿಕರ್ತನು ಅವತೀರ್ಣಗೊಳಿಸಿದ ಗ್ರಂಥಗಳಾಗಿವೆ.

**ಮುಸ್ಲಿಮರು ಪ್ರವಾದಿಗಳ ಹೆಸರು ಹೇಳುವಾಗ ಅಲೈಹಿಸ್ಸಲಾಂ (ಅವರ ಮೇಲೆ ಶಾಂತಿಯಿರಲಿ) ಎಂದು ಪ್ರಾರ್ಥಿಸುವವರಾಗಿದ್ದಾರೆ. (ಅ) ಇದರ ಸಂಕ್ಷಿಪ್ತ ರೂಪವಾಗಿದೆ. ಪ್ರವಾದಿ ಮುಹಮ್ಮದರ ಹೆಸರೆತ್ತಲ್ಪಟ್ಟಾಗ ಸಲ್ಲಾಲ್ಲಾಹು ಅಲೈಹಿವಸ್ಸಲ್ಲಂ (ಅವರ ಮೇಲೆ ಅಲ್ಲಾಹನ ಕರುಣೆ ಹಾಗೂ ಶಾಂತಿಯಿರಲಿ) ಎಂದು ಹೇಳುತ್ತಾರೆ. (ಸ) ಇದರ ಸಂಕ್ಷಿಪ್ತ ರೂಪವಾಗಿದೆ.**

**ಪ್ರವಾದಿಗಳು ಯಾರು?**

ಜನರಿಗೆ ಒಳಿತು ಮತ್ತು ಕೆಡುಕುಗಳನ್ನು ತಿಳಿಸಿಕೊಡಲು ಸೃಷ್ಟಿಕರ್ತನು ಅವರಿಂದಲೇ ಕೆಲವರನ್ನು ಆರಿಸಿ ದೌತ್ಯವನ್ನು ಒಪ್ಪಿಸುತ್ತಾನೆ. ಹೀಗೆ ದೌತ್ಯ ಒಪ್ಪಿಸಲ್ಪಟ್ಟವರು ಪ್ರವಾದಿಗಳಾಗಿದ್ದಾರೆ. ಮಾನವನಿಗೆ ಸನ್ಮಾರ್ಗ ತೋರಿಸಿಕೊಡಲು ಪ್ರತಿಯೊಂದು ಸಮುದಾಯದಲ್ಲಿಯೂ ಪ್ರವಾದಿಗಳು ನಿಯೋಗಿಸಲ್ಪಟ್ಟಿದ್ದಾರೆ. ಆದರ್ಶ ಜೀವನ ನಡೆಸುವ ಮೂಲಕ ಮಾನವತೆಯ ಪೂರ್ಣತೆಗೆ ತಲುಪಿದ ಪ್ರವಾದಿಗಳಾಗೂ ತಮ್ಮ ದಿವ್ಯತ್ವವಿದೆಯೆಂದು ವಾದಿಸಿರಲಿಲ್ಲ. ಅವರೆಲ್ಲರೂ ಮನುಷ್ಯರಾಗಿದ್ದರು. ದೇವನಿಂದ ನಿಯುಕ್ತರಾದ ಎಲ್ಲಾ ಪ್ರವಾದಿಗಳ ಮೇಲೆ ವಿಶ್ವಾಸವಿರಿಸುವುದು ಪ್ರತಿಯೋರ್ವ ಮುಸ್ಲಿಮನ ಬಾಧ್ಯತೆಯಾಗಿದೆ.

**'ಜನರೆಲ್ಲರೂ ಒಂದೇ ಸಮುದಾಯವಾಗಿದ್ದರು. ಆಮೇಲೆ ಅಲ್ಲಾಹನು ಸುವಾರ್ತೆ ಕೊಡುವವರಾಗಿಯೂ ಮುನ್ನೆಚ್ಚರಿಕೆ ನೀಡುವವರಾಗಿಯೂ ಪ್ರವಾದಿಗಳನ್ನು ನಿಯೋಗಿಸಿದನು. ಅವರು ಭಿನ್ನರಾಗಿದ್ದ ವಿಷಯದಲ್ಲಿ ತೀರ್ಮಾನ ಕಲ್ಪಿಸುವುದಕ್ಕಾಗಿ ಅವರ ( ಪ್ರವಾದಿಗಳ ) ಜೊತೆಗೆ ಸತ್ಯಪೂರ್ಣ ಗ್ರಂಥವನ್ನೂ ಕಳುಹಿಸಿದನು"**

**(ಖುರ್‌ಆನ್ 2 : 213)**

**ಮರಣಾನಂತರ ಜೀವನದ ಕುರಿತು ಇಸ್ಲಾಮ್ ಏನು ಹೇಳುತ್ತದೆ?**

ಮರಣವು ಜೀವನದ ಅಂತ್ಯವಲ್ಲ. ಬದಲಾಗಿ ಇಸ್ಲಾಮ್ ಅದು ಮರಣಾನಂತರ ಶಾಶ್ವತ ಜೀವನದೆಡೆಗಿನ ಪಯಣವಾಗಿದೆಯೆಂದು ಹೇಳುತ್ತದೆ.

**ನಾನೀಗ ಪುನರುತ್ಥಾನ ದಿವಸದ ಆಣೆ ಇಡುತ್ತೇನೆ. ಹೀಗೆಳೆಯುವ ಆತ್ಮದ ಆಣೆ ಇಡುತ್ತೇನೆ. ಮನುಷ್ಯ ಭಾವಿಸುತ್ತಿರುವನೇ, ನಾವು ಅವನ ಎಲುಬುಗಳನ್ನು ಒಂದುಗೂಡಿಸುವುದಿಲ್ಲವೆಂದು? ನಾವು ಅವನ ಬೆರಳು ತುದಿಗಳನ್ನು ಕೂಡಾ ರಚಿಸಲಿಕ್ಕೆ ಸಮರ್ಥರು**

**(ಖುರ್‌ಆನ್ 75 : 1- 4)**

ಇಲ್ಲಿ ಮಾಡುವ ಒಳಿತು-ಕೆಡುಕುಗಳಿಗೆ ತಕ್ಕುದಾದ ಪ್ರತಿಫಲ ದೊರೆಯುವುದು. ಮರಣಾನಂತರ ಜೀವನದಲ್ಲಿ ಮಾತ್ರವಾಗಿದೆ ಅಂತ್ಯದಿನದಲ್ಲಿ ಎಲ್ಲಾ ಸೃಷ್ಟಿಗಳು ನಾಶವಾದ ನಂತರ ಮಾನವನು ಪುನರೆಬ್ಬಿಸಲ್ಪಡುತ್ತಾನೆ ಎನ್ನುವುದು ಇಸ್ಲಾಮಿನ ವಿಶ್ವಾಸವಾಗಿದೆ. ಹೀಗೆ ಪುನರೆಬ್ಬಿಸಲ್ಪಟ್ಟ ನಂತರ ವಿಚಾರಣೆ ನಡೆಯುತ್ತದೆ. ಸರ್ವಶಕ್ತನ ನಿಯಂತ್ರಣದಲ್ಲಿರುವ ವಿಚಾರಣೆ. ಪ್ರಸ್ತುತ ವಿಚಾರಣೆಯ ಸಂದರ್ಭದಲ್ಲಿ ನಾವು ಮಾಡಿದ ಎಲ್ಲಾ ಒಳಿತು-ಕೆಡುಕುಗಳ ಚಿತ್ರಣವನ್ನು ನಮ್ಮ ಮುಂದಿಡಲಾಗುವುದು. ಅಲ್ಲಿ ಸತ್ಕರ್ಮ ಹಾಗೂ ದುಷ್ಕರ್ಮವೆಸಗಿದವರಿಗೆ ಅವರವರ ಕರ್ಮಕ್ಕನುಸಾರ ಪ್ರತಿಫಲ ಲಭಿಸುವುದು. ಒಳಿತಿನಲ್ಲಿ ನಿರತರಾಗಿ ಜೀವನವನ್ನು ಪರಿಶುದ್ಧವಾಗಿಟ್ಟುಕೊಂಡವರಿಗೆ ಶಾಂತಿಯ ಭವನವಾದ ಸ್ವರ್ಗ ಹಾಗೂ ಕೆಡುಕಿನಲ್ಲಿ ನಿರತರಾಗಿ ಜೀವನವನ್ನು ವ್ಯರ್ಥಗೊಳಿಸಿದವರಿಗೆ ನರಕದ ಯಾತನೆ ಲಭಿಸಲಿದೆ.

ನಿಶ್ಚಯವಾಗಿಯೂ ಸಜ್ಜನರು ಸುಖಾನುಭವದಲ್ಲಿರುವರು. ನಿಶ್ಚಯವಾಗಿಯೂ ದುಷ್ಕರ್ಮಿಗಳು ಜ್ವಲಿಸುವ ನರಕದಲ್ಲಿರುವರು. ಪ್ರತಿಫಲದ ದಿನ ಅವರನ್ನು ಅದರೊಳಗೆ ಹಾಕಲಾಗುವುದು. ಅದರಿಂದ ಅವರಿಗೆ ದೂರವಿರಲು ಸಾಧ್ಯವಿಲ್ಲ "

**(ಖುರ್‌ಆನ್ 82 : 13-16)**

**ಇಸ್ಲಾಮಿನ ವಿಧಿವಿಶ್ವಾಸ ಯಾವುದು?**

ಪ್ರಪಂಚದ ಪ್ರತಿಯೊಂದು ಪ್ರತಿಭಾಸಗಳು ದೇವನ ವ್ಯವಸ್ಥೆ ಪ್ರಕಾರ ಸಂಭವಿಸುತ್ತದೆ. ಈ ವ್ಯವಸ್ಥೆಯೇ ದೈವಿಕ ವಿಧಿ. ಈ ವಿಧಿಯಿಂದ ಕದಲಲು ಅಥವಾ ಅದನ್ನು ಬದಲಾಯಿಸಲು ಸೃಷ್ಟಿಗಳಿಗೆ ಸಾಧ್ಯವಿಲ್ಲ. ಸ್ವಯಂ ಮಾನವನ ಸ್ಥಿತಿಯೂ ಇದಕ್ಕಿಂತ ಭಿನ್ನವಲ್ಲ. ಮಾನವನ ಪರಿಸರ ಹಾಗೂ ದೈಹಿಕ ವ್ಯವಸ್ಥೆಗಳು ಕೂಡಾ ದೇವನ ವಿಧಿಗನುಗುಣವಾಗಿ ನೆಲೆಗೊಂಡಿದೆ. ಅವನಿಗೆ ಸಂಭವಿಸುವ ಒಳಿತು-ಕೆಡುಕುಗಳಿಗೆ ಕೂಡಾ ದೇವನ ವಿಧಿಯೇ ಕಾರಣ. ಮಾನವ ಸಮುದಾಯದ ಒಟ್ಟು ಹಿತಕ್ಕೆ ಒಳಿತು ಮತ್ತು ಕೆಡುಕು ಯಾವುದು ಎಂಬುದರ ಕುರಿತು ಸ್ಪಷ್ಟ ಅರಿವಿರುವ ಸರ್ವಜ್ಞನ ವ್ಯವಸ್ಥೆಯ ಪ್ರಕಾರವೇ ಪ್ರತಿಯೊಬ್ಬರಿಗೂ ಗುಣದೋಷಗಳುಂಟಾಗುತ್ತದೆಯೆಂಬ ವಿಶ್ವಾಸ ಇಸ್ಲಾಮಿನ ವಿಧಿವಿಶ್ವಾಸದ ತಿರುಳಾಗಿದೆ.

**ಇಸ್ಲಾಮಿಕ್ ಪ್ರಮಾಣಗಳು ಯಾವುವು?**

ಪವಿತ್ರ ಕುರ್‌ಆನ್ ಮತ್ತು ಪ್ರವಾದಿ ಮುಹಮ್ಮದ್ (ಸ) ರ ಜೀವನ ಮಾದರಿ ಇಸ್ಲಾಮಿನ ಮೂಲಭೂತ ಪ್ರಮಾಣಗಳಾಗಿವೆ.

**"ನಿಮ್ಮನ್ನು (ಮುಹಮ್ಮದರನ್ನು) ನಾವು ಸಕಲ ಮನುಷ್ಯರಿಗೆ ಸುವಾರ್ತೆಕೊಡುವವರಾಗಿಯೂ ಹಾಗೂ ಮುನ್ನೆಚ್ಚರಿಕೆ ನೀಡುವವರಾಗಿಯೂ ಕಳುಹಿಸಿದ್ದೇನೆ. ಆದರೆ ಜನರಲ್ಲಿ ಹೆಚ್ಚಿನವರು ಅರಿಯುವುದಿಲ್ಲ'**

**(ಖುರ್‌ಆನ್ 34 : 28)**

**ಮುಹಮ್ಮದ್ (ಸ)ರು ಯಾರು?**

ಮುಹಮ್ಮದ್ (ಸ)ರು ಇಸ್ಲಾಮಿನ ಅಂತಿಮ ಸಂದೇಶವಾಹಕರಾಗಿದ್ದಾರೆ. ಅವರ ಮೂಲಕ ದೇವ ಸಮರ್ಪಣೆಯ ಧರ್ಮವು ಪೂರ್ತೀಕರಿಸಲ್ಪಟ್ಟಿತು. ಪ್ರವಾದಿ ಮುಹಮ್ಮದ್ (ಸ)ರು ನೋಹ, ಅಬ್ರಹಾಂ, ಮೋಸೆಸ್, ಜೀಸಸ್ ಮಾತ್ರವಲ್ಲ, ನಮಗೆ ಹೆಸರು ಗೊತ್ತಿರುವ ಮತ್ತು ಗೊತ್ತಿರದ ವಿವಿಧ ಪ್ರದೇಶಗಳಿಗೆ ನಿಯುಕ್ತರಾದ ಎಲ್ಲಾ ಪ್ರವಾದಿಗಳ ಹಿಂಗಾಮಿಯಾಗಿದ್ದಾರೆ. ಪ್ರವಾದಿ ಮುಹಮ್ಮದ್ (ಸ) ಒಂದು ಹೊಸ ಧರ್ಮವನ್ನು ಸ್ಥಾಪಿಸಿಲ್ಲ. ಬದಲಾಗಿ, ಅವರು ಪೂರ್ವಿಕ ಪ್ರವಾದಿಗಳು ಉಪದೇಶಿಸಿದ ಧರ್ಮವನ್ನು ಪೂರ್ತಿಗೊಳಿಸಿದರು.

**ತಮ್ಮಲ್ಲಿರುವ ತೌರಾತ್ ಮತ್ತು ಇಂಜೀಲ್‌ನಲ್ಲಿ ಉಲ್ಲೇಖಿತವಾಗಿ ಕಾಣುವ ಅನಕ್ಷರಸ್ಥ ಪ್ರವಾದಿಯಾದ ಸಂದೇಶವಾಹಕರನ್ನು (ಮುಹಮ್ಮದ್) ಅನುಸರಿಸುವವರಿಗೆ (ಕರುಣೆ!) ಅವರು ಅವರಿಗೆ ಒಳಿತನ್ನು ಅಜ್ಞಾಪಿಸುತ್ತಾರೆ. ಮತ್ತು ಕೆಡುಕನ್ನು ನಿರೋಧಿಸುತ್ತಾರೆ. ಶುದ್ಧ ವಸ್ತುಗಳನ್ನು ಅವರಿಗೆ ಅನವದನೀಯಗೊಳಿಸಿ, ಅಶುದ್ಧವಾದವುಗಳನ್ನು ನಿಷಿದ್ಧಗೊಳಿಸುತ್ತಾರೆ. ಹಾಗೂ ಅವರ ಮೇಲಿರುವ ಭಾರವನ್ನೂ ಅವರ ಮೇಲಿರುವ ಶೃಂಖಲೆಯನ್ನೂ ಅವರಿಂದ ಕೆಳಗಿಳಿಸುತ್ತಾರೆ. ಹೀಗೆ ಯಾರು ಇವರಲ್ಲಿ ವಿಶ್ವಾಸವಿರಿಸಿ ಇವರಿಗೆ ಬೆಂಬಲ ಕೊಟ್ಟು ಸಹಾಯ ಮಾಡಿದರೋ ಹಾಗೂ ಇವರ ಜೊತೆ ಅವತೀರ್ಣವಾದ ಆ ಪ್ರಕಾಶವನ್ನು ಅನುಗಮಿಸುತ್ತಾರೋ ಅವರೇ ವಿಜಯಿಗಳು"**

**(ಖುರ್‌ಆನ್ 7 : 157)**

**ಮುಹಮ್ಮದ್ (ಸ)ರ ಜೀವನದ ಕುರಿತು.........?**

ಪ್ರವಾದಿ ಮುಹಮ್ಮದ್ (ಸ) ರು ಕ್ರಿ.ಶ. 571ರಲ್ಲಿ ಮಕ್ಕಾದಲ್ಲಿ ಜನಿಸಿದರು. ಅವರ ಜನನಕ್ಕಿಂತ ಮೊದಲು ತಂದೆ ಹಾಗೂ ಏಳು ವರ್ಷ ಪ್ರಾಯದಲ್ಲಿ ತಾಯಿ ಮೃತರಾದುದರಿಂದ ಅವರು ಅನಾಥರಾಗಿ ಬೆಳೆದರು. ಎಲ್ಲಾ ವಿವಿಧ ಕೆಡುಕುಗಳು ವಿಜೃಂಭಿಸುತ್ತಿದ್ದ ಅರೇಬಿಯಾದಲ್ಲಿ ಅವರು ತಮ್ಮ ಚಿಕ್ಕ ಪ್ರಾಯದಲ್ಲಿಯೇ ಸತ್ಯಸಂಧ ಹಾಗೂ ಪ್ರಾಮಾಣಿಕನೆಂದು ಪ್ರತ್ಯೇಕವಾಗಿ ಗುರುತಿಸಲ್ಪಡುತ್ತಿದ್ದರು. ಉದಾತ್ತ ಗುಣಗಳನ್ನೆಲ್ಲ ಮೈಗೂಡಿಸಿಕೊಂಡಿದ್ದ ಮುಹಮ್ಮದ್ (ಸ) ರು ತಮ್ಮ ಇಪ್ಪತ್ತೈದನೆಯ ಹರೆಯದಲ್ಲಿ ನಲ್ವತ್ತು ವರ್ಷ ಪ್ರಾಯದ ಖದೀಜ ಎಂಬ ವರ್ತಕಿಯನ್ನು ವಿವಾಹವಾದರು. ಮುಹಮ್ಮದ್ (ಸ)ರಿಗೆ ನಲ್ವತ್ತು ವರ್ಷ ಪ್ರಾಯವಾದಾಗ ಖುರ್‌ಆನ್ ಅವತೀರ್ಣಗೊಳ್ಳಲಾರಂಭಿಸಿತು. ಪ್ರವಾದಿಯಾಗಿ ಆರಿಸಲ್ಪಟ್ಟ ಅವರು ತನ್ನ ಸಮುದಾಯಕ್ಕೆ ದೈವಿಕ ಸಂದೇಶವನ್ನು ತಲುಪಿದರು. ಆದರೆ ಪ್ರತಿಕ್ರಿಯೆ ನಿಷೇಧಾತ್ಮಕವಾಗಿತ್ತು. ಅವರು ಮರ್ಧನ, ಹಿಂಸೆ, ಆಕ್ರಮಣ, ಆರೋಪ ಹಾಗೂ ಕೊಲೆ ಬೆದರಿಕೆಗಳಿಗೆ ಗುರಿಯಾಗಬೇಕಾಯಿತು. ಸತ್ಯಧರ್ಮವನ್ನು ಅನುಸರಿಸಿ ಜೀವಿಸುವ ಸ್ವಾತಂತ್ರ್ಯಕ್ಕಾಗಿ ಅವರು ತಮ್ಮ ಹುಟ್ಟೂರನ್ನು ತೊರೆದು ಉತ್ತರ ಭಾಗದಲ್ಲಿರುವ ಯಸ್ರಿಬ್ (ಮದೀನಾ)ಗೆ ವಲಸೆ ಹೋದರು. ಅವರು ಮದೀನಾದಲ್ಲಿ ಒಂದು ಇಸ್ಲಾಮಿಕ್ ರಾಷ್ಟ್ರವನ್ನು ಸ್ಥಾಪಿಸಿ ಅದರ ನಾಯಕತ್ವವನ್ನು ವಹಿಸಿಕೊಂಡರು. ಮದೀನಾದಲ್ಲಿ ಕೂಡಾ ಅವಿಶ್ವಾಸಿಗಳು ಸತ್ಯ ಧರ್ಮದ ಪ್ರಕಾರ ಜೀವಿಸಲು ಅನುಮತಿಸದಿದ್ದಾಗ ಅವರೊಂದಿಗೆ ಯುದ್ಧ ಏರ್ಪಟ್ಟಿತು. ಅದು ಧಾರ್ಮಿಕ ಸ್ವಾತಂತ್ರ್ಯಕ್ಕಾಗಿ ನಡೆದ ಯುದ್ಧಗಳಾಗಿತ್ತು. ಅವರು ತಮ್ಮ ಇಪ್ಪತ್ಮೂರು ವರ್ಷಗಳ ಪ್ರವಾದಿತ್ವದ ಜೀವನದಲ್ಲಿ ಜಗತ್ತಿಗೆ ಆದರ್ಶ ಪ್ರಾಯರಾದ ಒಂದು ಸಮುದಾಯವನ್ನು ರೂಪಿಸಿ, ಅರ್ವತ್ತಮೂರನೇ ವರ್ಷ ಪ್ರಾಯದಲ್ಲಿ ಇಹಲೋಕಕ್ಕೆ ವಿದಾಯ ಕೋರಿದರು.

**"ಮುಹಮ್ಮದರು ನಿಮ್ಮ ಪುರುಷರಲ್ಲಾರ ಪಿತರೂ ಇಲ್ಲ. ಆದರೆ ಅವರು ಅಲ್ಲಾಹನ ಸಂದೇಶವಾಹಕರೂ, ಪ್ರವಾದಿಗಳಲ್ಲಿ ಕೊನೆಯವರು ಆಗಿರುತ್ತಾರೆ"**

**(ಖುರ್‌ಆನ್ 33 : 40)**

**ಮುಹಮ್ಮದ್ (ಸ) ರು ಅಂತ್ಯ ಪ್ರವಾದಿಯೆಂದು ಹೇಳಲು ಕಾರಣವೇನು?**

ಪ್ರತಿಯೋರ್ವ ಪ್ರವಾದಿ ಒಂದು ನಿರ್ದಿಷ್ಟ ಪ್ರದೇಶ ಹಾಗೂ ಜನಾಂಗಕ್ಕೆ ಮಾತ್ರ ನಿಯೋಗಿಸಲ್ಪಟ್ಟಿದ್ದರು. ಅವರೆಲ್ಲರೂ ಸಮಗ್ರ ಜಗತ್ತಿಗೆ ಅನುಗ್ರಹವಾಗಿ ಆಗಮಿಸಲಿರುವ ಮಹಾ ಪ್ರವಾದಿಯೋರ್ವರ ಭವಿಷ್ಯ ನುಡಿದಿದ್ದರು. ಮುಹಮ್ಮದ್ (ಸ)ರು ಸಮಗ್ರ ಜಗತ್ತಿಗೆ ಪ್ರವಾದಿಯಾಗಿದ್ದಾರೆ. ಅವರು ಸಮರ್ಪಿಸಿದ ಸಂದೇಶ ಲೋಕದ ಕಟ್ಟಕಡೆಯ ವ್ಯಕ್ತಿ ಕೂಡಾ ಸ್ವೀಕರಿಸುವಂತದ್ದಾಗಿದೆ. ಪ್ರವಾದಿಗಳಿಗೆ ನೀಡಿದ ಅತಿಮಾನುಷ ದೃಷ್ಟಾಂತಗಳು ಅವರ ಕಾಲಾನಂತರ ನೆಲೆ ನಿಲ್ಲುವಂತದ್ದಾಗಿರಲಿಲ್ಲ. ಆದರೆ ಪ್ರವಾದಿ ಮುಹಮ್ಮದ್ (ಸ)ರಿಗೆ ದಯಪಾಲಿಸಲ್ಪಟ್ಟ ಕುರ್‌ಆನ್ ಎಂಬ ದೃಷ್ಟಾಂತವು ಅಂತ್ಯದಿನದ ತನಕ ಯಾವುದೇ ಬದಲಾವಣೆಯಿಲ್ಲದೆ ನೆಲೆಗೊಳ್ಳುವಂತದ್ದಾಗಿದೆ. ಅವರ ಈ ದೃಷ್ಟಾಂತವನ್ನು ಯಾರು ಕೂಡಾ ಪರಿಶೋಧಿಸಿ ಖಚಿತಪಡಿಸಿಕೊಳ್ಳಬಹುದಾಗಿದೆ. ಬದುಕಿನ ಪ್ರತಿಯೊಂದು ಘಳಿಗೆಯ ಪ್ರತಿಯೊಂದು ಘಟನೆಗಳು ಲೋಕಾವಸಾನದ ತನಕ ಜನರಿಗೆ ಮಾದರಿಯಾಗುವಂತೆ ಸಮಗ್ರ ಮತ್ತು ಸ್ಪಷ್ಟವಾಗಿ ದಾಖಲಿಸಿಡಲಾಗಿದೆ. ಪವಿತ್ರ ಕುರ್‌ಆನ್ ಮತ್ತು ಹದೀಸ್ ಪ್ರವಾದಿಗಳ ಶೃಂಖಲೆ ಕೊನೆಗೊಂಡಿರುವುದರಿಂದ ಇನ್ನು ಜಗತ್ತಿಗೆ ಪ್ರವಾದಿಗಳು ಆಗಮಿಸುವುದಿಲ್ಲವೆಂದು ಸ್ಪಷ್ಟಪಡಿಸಿದೆ. ಆದ ಕಾರಣ ಲೋಕಾವಸಾನದ ತನಕ ಭೂಮುಖದ ಮೇಲೆ ಜನಿಸಲಿರುವವರೆಲ್ಲ ಕುರ್‌ಆನ್ ಮತ್ತು ಪ್ರವಾದಿಚರ್ಯೆಯನ್ನು ಸ್ವೀಕರಿಸುವುದು ಅನಿವಾರ್ಯವಾಗಿದೆ.

**ಕುರ್‌ಆನ್ ಏನು?**

ಪವಿತ್ರ ಕುರ್‌ಆನ್ ಅಂತಿಮ ಪ್ರವಾದಿ (ಸ) ಯವರ ಮೂಲಕ ಅವತೀರ್ಣಗೊಂಡ ಅಂತಿಮ ದೈವಿಕ ಗ್ರಂಥವಾಗಿದೆ. ಅದರಲ್ಲಿರುವುದೆಲ್ಲವೂ ದೈವಿಕ ವಚನಗಳಾಗಿವೆ. ಅದು ಲೋಕಾವಸಾನದ ತನಕವಿರುವ ಎಲ್ಲಾ ಜನರಿಗೆ ಮಾರ್ಗದರ್ಶನ ಗ್ರಂಥವಾಗಿದೆ. ಆದುದರಿಂದ ಪವಿತ್ರ ಕುರ್‌ಆನನ್ನು ಅಂತ್ಯ ದಿನದ ತನಕ ಯಾವುದೇ ಬದಲಾವಣೆ ಸಂಭವಿಸಿದಂತೆ ರಕ್ಷಿಸಲಾಗುವುದೆಂದು ಅದನ್ನು ಅವತೀರ್ಣಗೊಳಿಸಿದ ಸೃಷ್ಟಿಕರ್ತನೇ ಜನರಿಗೆ ವಾಗ್ದಾನ ನೀಡಿದ್ದಾನೆ. ಇಂದು ಜಗತ್ತಿನಲ್ಲಿ ಎಲ್ಲಾ ವಿಧದ ಮಾನವ ಹಸ್ತಕ್ಷೇಪದಿಂದ ಸಂಪೂರ್ಣ ಮುಕ್ತವಾಗಿ ನೆಲೆಗೊಂಡಿರುವ ಏಕೈಕ ಗ್ರಂಥವೆಂದರೆ ಪವಿತ್ರ ಕುರ್‌ಆನ್ ಮಾತ್ರ. ಅದು ಏಕಕಾಲದಲ್ಲಿ ಒಂದು ಮಾರ್ಗದರ್ಶನ ಗ್ರಂಥವಾಗಿರುವುದರ ಜತೆಗೆ, ಅಂತಿಮ ಪ್ರವಾದಿಯವರಿಗೆ ದಯಪಾಲಿಸಲ್ಪಟ್ಟ ಅತಿಮಾನುಷ ದೃಷ್ಟಾಂತವೂ ಆಗಿದೆ.

**ಕುರ್‌ಆನ್‌ನಲ್ಲಿ ಪ್ರತಿಪಾದಿಸಲ್ಪಟ್ಟಿರುವುದೇನು?**

ಪವಿತ್ರ ಕುರ್‌ಆನ್‌ನಲ್ಲಿ ಮಾನವನ ಇಹಲೋಕ ಮತ್ತು ಮರಣಾ ನಂತರ ಜೀವನದ ಯಶಸ್ಸಿಗೆ ಅಗತ್ಯವಿರುವ ಧಾರ್ಮಿಕ ನಿರ್ದೇಶನಗಳಿವೆ. ಸೃಷ್ಟಿಕರ್ತ ಮತ್ತು ಸೃಷ್ಟಿಗಳ ನಡುವಿನ ಪರಸ್ಪರ ಸಂಬಂಧವೇ ಕುರ್‌ಆನಿನ ಕೇಂದ್ರೀಯ ವಿಷಯವೆಂದು ಹೇಳಬಹುದು. ಅದರಲ್ಲಿ ಮಾನವ ಸಮುದಾಯವನ್ನು ಒಳಿತಿನ ಔನ್ನತ್ಯಕ್ಕೇರಿಸುವ ವಿಶ್ವಾಸಾಚಾರಾಗಳು ಮತ್ತು ಜೀವನ ಕ್ರಮದ ಕುರಿತು ಪ್ರತಿಪಾದನೆಗಳಿವೆ. ಅದು ಜನರ ಗಮನವನ್ನು ದೈವಿಕ ಮಾರ್ಗದರ್ಶನದೆಡೆಗೆ ಸೆಳೆಯಲು ಗತಕಾಲದ ಘಟನೆಗಳನ್ನು

ಉಲ್ಲೇಖಿಸುತ್ತದೆ. ಅದರಲ್ಲಿ ಆತ್ಮಸಂಸ್ಕರಣೆಯ ಉಪದೇಶಗಳಿರುವಂತೆ ಐಹಿಕ ಜೀವನದಲ್ಲಿ ಪಾಲಿಸಬೇಕಾದ ವಿಧಿನಿಷೇಧಗಳೂ ಇವೆ. ಕುರ್‌ಆನ್‌ನಲ್ಲಿ ಸೃಷ್ಟಿಕರ್ತನ ಅಸ್ತಿತ್ವವನ್ನು ಮನುಷ್ಯರಿಗೆ ಮನವರಿಕೆ ಮಾಡಿಕೊಡುವ ರೀತಿಯಲ್ಲಿ ಪ್ರಪಂಚದ ಪ್ರತಿಭಾಸಗಳ ಕುರಿತು ವಿವರಣೆಯೂ ಇದೆ.

**ನಮ್ಮ ದಾಸನಿಗೆ ನಾವು ಅವತೀರ್ಣಗೊಳಿಸಿರುವುದರಲ್ಲಿ (ಖುರ್‌ಆನ್ ಬಗ್ಗೆ) ನಿಮಗೆ ಸಂದೇಹವಿದ್ದರೆ ಅದರಂತಿರುವ ಒಂದು ಅಧ್ಯಾಯವನ್ನಾದರೂ ರಚಿಸಿ ತನ್ನಿರಿ. ಅಲ್ಲಾಹನನ್ನು ಬಿಟ್ಟು ನಿಮ್ಮ ಸಹಾಯಕರೆಲ್ಲರನ್ನು ಕರೆದುಕೊಳ್ಳಿರಿ. ನೀವು ಸತ್ಯವಂತರಾಗಿದ್ದರೆ (ಹೀಗೆ ಮಾಡಬೇಕು) ನೀವು ಅದನ್ನು ಮಾಡಲು ಸಾಧ್ಯವಾಗದಿದ್ದರೆ ನಿಮಗದು ಯಾವತ್ತೂ ಅಸಾಧ್ಯ - ಮನುಷ್ಯರು ಮತ್ತು ಜಿನ್ನ್‌ಗಳು ಇಂಧನವಾಗಲಿರುವ ನರಕಾಗ್ನಿಯ ಕುರಿತು ಭಯಪಡಿರಿ. ಅದು ಸತ್ಯನಿಷೇದಿಗಳಿಗಾಗಿ ಸಜ್ಜುಗೊಳಿಸಲ್ಪಟ್ಟಿದೆ.**

**(ಖುರ್‌ಆನ್ 2 : 23, 24)**

**ಕುರ್‌ಆನ್ ಒಂದು ಅತಿಮಾನುಷ ದೃಷ್ಟಾಂತವೆಂದು ಹೇಳಲು ಕಾರಣವೇನು?**

ಪವಿತ್ರ ಕುರ್‌ಆನ್ ಮಾನವರಿಗೆ ರಚಿಸಲು ಅಸಾಧ್ಯವಾದ ಒಂದು ವೈಶಿಷ್ಟ ಪೂರ್ಣ ಗ್ರಂಥವಾಗಿದೆ. ನಲ್ವತ್ತು ವರ್ಷಗಳ ಕಾಲ ಯಾವ ಸಾಹಿತ್ಯಾಭಿರುಚಿಯನ್ನು ಪ್ರಕಟಿಸಿದ ಅನಕ್ಷರಸ್ಥರೋರ್ವರಿಂದ ಲೋಕವು ಆಲಿಸಿದ ಕುರ್‌ಆನಿನ ಸಾಹಿತ್ಯ ಶೈಲಿಯನ್ನು ಯಾರಿಗೂ ಅನುಕರಿಸಲು ಅಸಾಧ್ಯ. ಅದಕ್ಕೆ ಅದರದ್ದೇ ಆದ ಶೈಲಿ ಇದೆ. ಇಂದು ನೆಲೆ ನಿಂತಿರುವ ವೇದ ಗ್ರಂಥಗಳ ಪೈಕಿ ಸ್ವಯಂ ದೈವಿಕವೆಂದು ವಾದಿಸುವ ಹಾಗೂ ಅವತೀರ್ಣಗೊಂಡ ರೂಪದಲ್ಲಿಯೇ ಬಾಕಿಯುಳಿದಿರುವ ಏಕೈಕ ಗ್ರಂಥ ಕುರ್‌ಆನ್ ಮಾತ್ರವಾಗಿದೆ. ಕುರ್‌ಆನಿನ ನೈತಿಕ ನಿಯಮಗಳು ಸಾರ್ವತ್ರಿಕವಾಗಿದ್ದು, ಅದು ಪ್ರತಿಪಾದಿಸುವ ಸನ್ಮಾರ್ಗದ ವ್ಯವಸ್ಥೆಗೆ ಸಮಾನವಾದುದು ಯಾವುದೂ ಇಲ್ಲ. ಇಪ್ಪತ್ತೂಮೂರು ವರ್ಷಗಳ ಸುದೀರ್ಘ ಅವಧಿಯಲ್ಲಿ ವಿಭಿನ್ನ ಪರಿಸ್ಥಿತಿ ಹಾಗೂ ವಿಭಿನ್ನ ವಿಷಯಗಳ ಕುರಿತು ಅವತೀರ್ಣಗೊಂಡ ಕುರ್‌ಆನ್ ಸೂಕ್ತಗಳಲ್ಲಿ ಯಾವುದೇ ವೈರುದ್ಯವಿಲ್ಲದಿರುವುದು ಒಂದು ಆಶ್ಚರ್ಯವೇ ಸರಿ.

ಕುರ್‌ಆನ್ ಸೃಷ್ಟಿಸಿದ ಬದಲಾವಣೆ ವ್ಯಾಪಕ ಹಾಗೂ ಮಹತ್ತರವಾಗಿದೆ. ಅದು ಎಲ್ಲಾ ನೆಲೆಯಲ್ಲಿಯೂ ಅಂಧವಾಗಿದ್ದ ಒಂದು ಸಮುದಾಯವನ್ನು ಇಪ್ಪತ್ತೂಮೂರು ವರ್ಷಗಳ ಅವಧಿಯಲ್ಲಿ ಸಮಗ್ರ ಜಗತ್ತಿಗೆ ಆದರ್ಶನೀಯರಾದ ಒಂದು ಸಮಾಜವನ್ನಾಗಿ ಪರಿವರ್ತಿಸಿದ ಗ್ರಂಥವಾಗಿದೆ. ಕುರ್‌ಆನಿನ ಭವಿಷ್ಯ ನುಡಿ ವಸ್ತುಶಃ ಸಾಕಾರಗೊಂಡಿರುವುದರಿಂದ ಅದು ಸರ್ವಜ್ಞಾನಿಯಿಂದ ಅವತೀರ್ಣಗೊಂಡ ಗ್ರಂಥವಾಗಿದೆಯೆಂದು ಸಾಬೀತಾಗಿದೆ.

ಹದಿನಾಲ್ಕು ಶತಮಾನಗಳ ಮೊದಲು ಜಗತ್ತು ವಿಜ್ಞಾನ ಮತ್ತು ತಾಂತ್ರಿಕ ಜ್ಞಾನದಲ್ಲಿ ಶೂನ್ಯಾವಸ್ಥೆಯಲ್ಲಿದ್ದಾಗ ಅವತೀರ್ಣಗೊಂಡ ಕುರ್‌ಆನ್ ಸೂಕ್ತಗಳಲ್ಲಿ ಒಂದು ಕೂಡಾ ಇಂದಿನ ವೈಜ್ಞಾನಿಕ ಸಂಶೋಧನೆಗಳ ಫಲಿತಾಂಶಗಳಿಗೆ ವಿರುದ್ಧವಾದುದನ್ನು ಪ್ರತಿಪಾದಿಸದಿರುವುದು ಅದರ ಮತ್ತೊಂದು ಅದ್ಭುತವಾಗಿದೆ. ಮಾತ್ರವಲ್ಲದೆ, ಆಧುನಿಕ ವಿಜ್ಞಾನದ ಸಂಶೋಧನೆಗಳು ಪವಿತ್ರ ಕುರ್‌ಆನ್ ಸೃಷ್ಟಿಕರ್ತನ ವತಿಯಿಂದಲೇ ಅವತೀರ್ಣಗೊಂಡಿದೆಯೆಂದು ಸ್ಪಷ್ಟಪಡಿಸುತ್ತಿರುವುದು ಅದರ ಅತಿಮಾನುಷಿಕತೆಗೆ ಮತ್ತೊಂದು ಪ್ರಬಲ ಪುರಾವೆಯಾಗಿದೆ.

**ಇಸ್ಲಾಮಿಕ್ ಕರ್ಮಗಳು ಯಾವುವು?**

ಇಸ್ಲಾಮಿನಲ್ಲಿ ಅತಿ ಪ್ರಮುಖರಾದ ಐದು ಕಡ್ಡಾಯ ಕರ್ಮಾನುಷ್ಠಾನಗಳಿವೆ. ಸತ್ಯಸಾಕ್ಷ್ಯ, ನಮಾಝ್, ಝಕಾತ್, ವ್ರತಾನುಷ್ಠಾನ, ಹಜ್ಜ್

**ಸತ್ಯ ಸಾಕ್ಷ್ಯ ಎಂದರೇನು?**

'ಆರಾಧನೆಗೆ ಅರ್ಹನಾದವನು ಅಲ್ಲಾಹನಲ್ಲದೆ ಬೇರೆ ಯಾರೂ ಇಲ್ಲ ಹಾಗೂ ಮುಹಮ್ಮದ್ (ಸ) ರು ಅಲ್ಲಾಹನ ಸಂದೇಶವಾಹಕರಾಗಿರುವರೆಂದು ನಾನು ಸಾಕ್ಷ್ಯವಹಿಸುತ್ತೇನೆ' ಎಂಬ ಪ್ರತಿಜ್ಞಾವಾಕ್ಯವನ್ನು ಉಚ್ಛರಿಸಿ ಒಬ್ಬನು ಮುಸ್ಲಿಮನಾಗುತ್ತಾನೆ. ಈ ಸತ್ಯ ಸಾಕ್ಷ್ಯದ ವಾಕ್ಯ ಉಚ್ಚರಿಸುವ ಮೂಲಕ ಒಬ್ಬ ವ್ಯಕ್ತಿ ಏಕನಾದ ಸೃಷ್ಟಿಕರ್ತನಿಗಲ್ಲದೆ ಬೇರೆ ಯಾರಿಗೂ ಆರಾಧನೆಗಳನ್ನು ಅರ್ಪಿಸುವುದಿಲ್ಲ ಹಾಗೂ ಪ್ರವಾದಿ ಮುಹಮ್ಮದ್ (ಸ) ರ ಜೀವನವನ್ನು ಆದರ್ಶವಾಗಿ ಸ್ವೀಕರಿಸಿಕೊಂಡು ಬದುಕುತ್ತೇನೆಂದು ಪ್ರತಿಜ್ಞೆ ತೆಗೆದುಕೊಳ್ಳುತ್ತಾನೆ.

**ನಮಾಝ್ ಎಂದರೇನು?**

ಐದು ಹೊತ್ತಿನ ಕಡ್ಡಾಯ ನಮಾಝ್ ಪ್ರತಿಯೋರ್ವ ಮುಸ್ಲಿಮನ ಬಾಧ್ಯತೆಯಾಗಿದೆ. ಅರುಣೋದಯಕ್ಕಿಂತ ಮೊದಲು, ಮಧ್ಯಾಹ್ನ, ಸಾಯಂಕಾಲ, ಸೂರ್ಯಾಸ್ತಮಾನದ ನಂತರ ಹಾಗೂ ರಾತ್ರಿ ಕಡ್ಡಾಯ ನಮಾಝ್‌ನ ಸಮಯಗಳಾಗಿವೆ. ನಮಾಝ್ ಅಂಗಸ್ನಾನ ಮಾಡಿ ಭಕ್ತಿಪೂರ್ವಕವಾಗಿ ಸರ್ವಶಕ್ತನೊಂದಿಗೆ ನಡೆಸುವ ಸಂಭಾಷಣೆಯಾಗಿದೆ. ಮನಸ್ಸಿನಲ್ಲಿ ಪ್ರತಿಜ್ಞೆ ತೆಗೆದುಕೊಂಡು ಪ್ರಾರ್ಥನೆಯೊಂದಿಗೆ ಕೈಕಟ್ಟಿ ನಿಂತು, ಬಾಗಿ, ಸಾಷ್ಟಾಂಗವೆರಗಿ, ಕೂತು ಐದು ಹೊತ್ತು ಕ್ಲಪ್ತವಾಗಿ ನಮಾಝ್ ನಿರ್ವಹಿಸುವ ನೈಜ ಮುಸ್ಲಿಮನ ಜೀವನ ಎಲ್ಲಾ ವಿಧದ ಕೆಡುಕುಗಳಿಂದ ಮುಕ್ತವಾಗಿರುವುದು ಖಚಿತವಿದೆ.

**ನಿಮಗೆ ಭೋಧಿಸಲಾಗಿರುವ ದೈವಿಕ ಗ್ರಂಥದಿಂದ ಓದಿ ಕೇಳಿಸಿರಿ ಮತ್ತು ನಮಾಝನ್ನು ಸ್ಥಿರಗೊಳಿಸಿರಿ. ನಿಶ್ಚಯವಾಗಿಯೂ ನಮಾಝ್ ದುಷ್ಕರ್ಮದಿಂದಲೂ ಅಶ್ಲೀಲತೆಯಿಂದಲೂ ತಡೆಯುತ್ತೆ. ಅಲ್ಲಾಹನ ಸ್ಮರಣೆಯಾದರೋ ಅತಿ ಮಹತ್ತರವಾದ ಒಂದು ಕಾರ್ಯವೇ ಆಗಿದೆ. ನೀವು ಮಾಡುತ್ತಿರುವುದನ್ನೆಲ್ಲ ಅಲ್ಲಾಹನು ಅರಿಯುತ್ತಾನೆ**

**(ಖುರ್ ಆನ್ 29 : 45)**

**ಝಕಾತ್ ಎಂದರೇನು?**

**"ಅವರನ್ನು ಶುದ್ಧೀಕರಿಸುವ ಮತ್ತು ಸಂಸ್ಕರಿಸುವ ದಾನವನ್ನು ಅವರ ಸೊತ್ತುಗಳಿಂದ ಪಡೆಯಿರಿ ಹಾಗೂ ಅವರಿಗಾಗಿ ಪ್ರಾರ್ಥಿಸಿರಿ.**

**(ಖುರ್‌ಆನ್ 9 : 103)**

ಸಮಾಜದಲ್ಲಿ ವಿವಶರಾಗಿರುವ ಜನರಿಗೆ ಸ್ವಂತ ಧನದಿಂದ ಒಂದು ನಿರ್ದಿಷ್ಟ ಪಾಲನ್ನು ಮೀಸಲಾಗಿಡುವುದು ಮುಸ್ಲಿಮರ ಬಾಧ್ಯತೆಯಾಗಿದೆ. ಈ ಕಡ್ಡಾಯ ದಾನವೇ ಝಕಾತ್. ರೂಪ್ಯಾ

ವ್ಯಾಪಾರಿ ಸರಕಿಗೆ ವರ್ಷಕೊಂದಾವರ್ತಿ ಶೇಕಡಾ ಎರಡೂವರೆ ಹಾಗೂ ಕೃಷಿ ಉತ್ಪನ್ನಗಳಿಗೆ ಶೇಕಡಾ ಹತ್ತರ (ನೀರಾವರಿಯ ಕೃಷಿಗೆ ಶೇಕಡಾ ಐದು) ಪ್ರಮಾಣದಲ್ಲಿ ಝಕಾತ್ ಕೊಡಬೇಕು. ಝಕಾತ್ ನೀಡಲು ಅರ್ಹವಾಗಲು ಒಂದೊಂದಕ್ಕೆ ಒಂದೊಂದು ಪರಿಧಿಗಳು ನಿಶ್ಚಯಿಸಲ್ಪಟ್ಟಿದೆ. ಇಸ್ಲಾಮಿಕ್ ರಾಷ್ಟ್ರ, ಅದಿಲ್ಲದಿದ್ದರೆ ಸಮಾಜವು ಹೊಣೆಗಾರಿಕೆಯನ್ನು ಒಪ್ಪಿಸಿದ ಸ್ಥಾಪನೆಗಳು ಝಕಾತ್ ಕೊಡಲು ಅರ್ಹರಾದವರಿಂದ ಅದನ್ನು ಸಂಗ್ರಹಿಸಿ ಅದರ ಹಕ್ಕುದಾರರಿಗೆ ವಿತರಿಸಬಹುದಾಗಿದೆ.

**'ನಿಮ್ಮ ಮುಖಗಳನ್ನು ಪೂರ್ವ - ಪಶ್ಚಿಮ ದಿಶೆಗೆ ತಿರುಗಿಸುವುದರಲ್ಲಿ ಪುಣ್ಯ ಅಡಗಿಲ್ಲ. ಆದರೆ ಅಲ್ಲಾಹನಲ್ಲಿ, ಅಂತಿಮ ದಿವಸದಲ್ಲಿ, ಮಲಕ್‌ಗಳಲ್ಲಿ, ಗ್ರಂಥಗಳಲ್ಲಿ, ಪ್ರವಾದಿಗಳಲ್ಲಿ ವಿಶ್ವಾಸವಿಡುವವರು, ತಮ್ಮ ಧನವನ್ನು ಅಲ್ಲಾಹನ ಸಂಪ್ರೀತಿಗಾಗಿ ಬಂಧುಗಳಿಗೆ, ಅನಾಥರಿಗೆ, ದರಿದ್ರರಿಗೆ, ಸಂಚಾರಿಗಳಿಗೆ, ಸಹಾಯಾರ್ಥಿಗಳಿಗೆ ಮತ್ತು ದಾಸ್ಯವಿಮೋಚನೆಗಾಗಿ ಕೊಡುವವರು, ನಮಾಝನ್ನು ಸ್ಥಿರಗೊಳಿಸುವವರು, ಝಕಾತನ್ನು ಕೊಡುವವರು, ತಾವು ವಾಗ್ದಾನವಿತ್ತಿದ್ದರೆ ಅದನ್ನುಪೂರ್ಣಗೊಳಿಸುವವರು ಕಷ್ಟಕಾರ್ಪಣ್ಯದಲ್ಲಿ ಹಾಗೂ ಸಮರದ ವೇಳೆಯಲ್ಲಿ ಸಹನೆ ಕೈಗೊಳ್ಳುವವರೇ ಪುಣ್ಯಶೀಲರು. ಇಂತವರೇ ಸತ್ಯಸಂಧರು ಮತ್ತು ದೈವಭಕ್ತರು.**

**(ಕುರ್‌ಆನ್ 2:177)**

**ವೃತಾನುಷ್ಠಾನ ಎಂದರೇನು?**

ಒಂದು ತಿಂಗಳ ಕಾಲ ಹಗಲಿನ ಹೊತ್ತು ಅನ್ನಪಾನೀಯ ಹಾಗೂ ಲೈಂಗಿಕ ಸಂಪರ್ಕದಿಂದ ದೂರವಾಗಿ ವೃತಾನುಷ್ಠಾನ ಕೈಗೊಳ್ಳುವುದು ಪ್ರತಿಯೋರ್ವ ಮುಸ್ಲಿಮನ ಬಾಧ್ಯತೆಯಾಗಿದೆ. ವೃತಾನುಷ್ಠಾನಕ್ಕೆ ಕುರ್‌ಆನ್ ಅವತೀರ್ಣಗೊಳ್ಳಲಾರಂಭಿಸಿದ ರಮದಾನ್ ಮಾಸವು ನಿಶ್ಚಯಿಸಲ್ಪಟ್ಟಿದೆ. ವೃತಾನುಷ್ಠಾನದ ಮೂಲಕ ಮುಸ್ಲಿಮನು ದೇಹೇಚ್ಛೆಗಳನ್ನು ದೇವೇಚ್ಛೆಯ ಮುಂದೆ ಸಮರ್ಪಿಸುತ್ತಾನೆ.

**ರಮದಾನ್ ಜನರಿಗೆ ಮಾರ್ಗದರ್ಶನವಾಗಿ, ಸತ್ಯಾಸತ್ಯ ವಿವೇಚಕವಾಗಿ ಸುವ್ಯಕ್ತ ದೃಷ್ಟಾಂತಗಳೊಂದಿಗೆ ಖುರ್‌ಆನ್ ಅವತ್ತೀರ್ಣಗೊಂಡ ತಿಂಗಳಾಗಿದೆ. ಆದುದರಿಂದ ಆ ತಿಂಗಳಲ್ಲಿ ನಿಮ್ಮಲ್ಲಿ ಯಾರು ಉಪಸ್ಥಿತರಿರುವರೋ ಅವರು ಉಪವಾಸ ಆಚರಿಸಲಿ"**

**ಕುರ್‌ಆನ್ (2 : 185)**

**ಹಜ್ಜ್ ಎಂದರೇನು?**

ಆರೋಗ್ಯ ಹಾಗೂ ಆರ್ಥಿಕ ಸಾಮರ್ಥ್ಯವಿರುವ ಪ್ರತಿಯೋರ್ವ ಮುಸ್ಲಿಮನು ಜೀವನದಲ್ಲೊಂದಾವರ್ತಿ ಮಕ್ಕಾದಲ್ಲಿರುವ ಕಅಬಾಕ್ಕೆ ತೆರಳಿ ಹಜ್ಜ್ ನಿರ್ವಹಿಸಬೇಕೆನ್ನುವುದು ಇಸ್ಲಾಮಿನ ವಿಧಿಯಾಗಿದೆ. ವಿಭಿನ್ನ ರಾಷ್ಟ್ರ, ಭಾಷೆ ಹಾಗೂ ವರ್ಣದವರು ಹಜ್ಜ್ ತಿಂಗಳಲ್ಲಿ ಲಕ್ಷಾಂತರ ಸಂಖ್ಯೆಯಲ್ಲಿ ಮಕ್ಕಾದಲ್ಲಿ ಒಗ್ಗೂಡುತ್ತಾರೆ. ಅವರೆಲ್ಲರ ಮನದಲ್ಲಿ ಒಂದೇ ಚಿಂತನೆ, ನಾಲಿಗೆಯಲ್ಲಿ ಒಂದೇ ಮಂತ್ರ, ಧರಿಸಿದ್ದು ಒಂದೇ ರೀತಿಯ ವಸ್ತ್ರಗಳು - ಪುರುಷರು ಎರಡು ಬಿಳಿಬಟ್ಟೆ ಮಾತ್ರ ಒಂದು ಉಡಲು, ಮತ್ತೊಂದು ಹೊದಿಯಲು. (ಸ್ತ್ರೀಯರು ಮುಖ ಮತ್ತು ಮುಂಗೈಗಳನ್ನು ಹೊರತುಪಡಿಸಿ ದೇಹದ ಉಳಿದ ಭಾಗಗಳನ್ನೆಲ್ಲ ಮರೆಮಾಚುವ ವಸ್ತ್ರ) ಹಜ್ಜ್

ಇಸ್ಲಾಮಿನ ಏಕಮಾನವತಾವಾದ ಸಿದ್ಧಾಂತವನ್ನು ಪ್ರಾಯೋಗಿಕವಾಗಿ ಪ್ರಕಟಿಸುವ ಕರ್ಮವಾಗಿದೆ. ಒಡೆಯ-ಕಾರ್ಮಿಕ, ಕರಿಯ-ಬಿಳಿಯ, ಮೇಲ್ವರ್ಗ-ಕೆಳವರ್ಗ, ಉನ್ನತ-ನಿಕೃಷ್ಟ, ಸ್ವದೇಶಿ-ವಿದೇಶಿ ಎಂಬ ವ್ಯತ್ಯಾಸವಿಲ್ಲದ ಮಾನವತಾವಾದ - ಒಬ್ಬನೇ ದೇವ ಮತ್ತು ಅವನ ದಾಸರಾದ ಒಂದೇ ಜನಾಂಗ.

**ಒಬ್ಬನು ಮಾತು ಮತ್ತು ಕೃತಿಯಲ್ಲಿ ಅಶ್ಲೀಲತೆ ಹಾಗೂ ದುಷ್ಟತೆ ಪ್ರಕಟಿಸದೆ ಅಲ್ಲಾಹನಿಗಾಗಿ ಹಜ್ಜ್ ನಿರ್ವಹಿಸಿದರೆ ಅವನು ಮಾತೆಯ ಉದರದಿಂದ ಹುಟ್ಟಿದ ದಿನದಂತಾಗುವನು**

**- (ಪ್ರವಾದಿ ಮುಹಮ್ಮದ್)**

**ಕಅಬಾ ಎಂದರೇನು?**

ಕಅಬಾ ಎನ್ನುವುದು ಮಕ್ಕಾದಲ್ಲಿರುವ ಪುರಾತನ ಗೇಹದ ಹೆಸರಾಗಿದೆ. ಅದು ಸರ್ವಶಕ್ತನನ್ನು ಆರಾಧಿಸಲು ಮೊತ್ತಮೊದಲು ನಿರ್ಮಿಸಲ್ಪಟ್ಟ ಭವನವಾಗಿದೆ. ಪ್ರವಾದಿ ಇಬ್ರಾಹೀಮ್ (ಅ)ರು ದೈವಿಕ ಆದೇಶದ ಪ್ರಕಾರ ತಮ್ಮ ಪುತ್ರ ಹಾಗೂ ಪತ್ನಿಯನ್ನು ಬಿಟ್ಟು ಹೋದದ್ದು ಕಅಬಾದ ಪರಿಸರದಲ್ಲಾಗಿತ್ತು. ದೇವನ ಆದೇಶ ಪ್ರಕಾರ ಪ್ರವಾದಿ ಇಬ್ರಾಹಿಂ (ಅ) ಮತ್ತು ಅವರ ಪುತ್ರ ಇಸ್ಮಾಯಿಲ್ (ಅ) ಕಅಬಾದ ಪುನರ್‌ನಿರ್ಮಾಣ ಕಾರ್ಯವನ್ನು ನೆರವೇರಿಸಿದರು. ಮುಸ್ಲಿಮರು ಕಅಬಾವನ್ನು ಅಭಿಮುಖವಾಗಿಟ್ಟುಕೊಂಡು ನಮಾಝ್ ನಿರ್ವಹಿಸುತ್ತಾರೆ. ಹಜ್ಜ್‌ನ ಕರ್ಮಗಳೆಲ್ಲವೂ ಕಅಬಾದ ಪರಿಸರದಲ್ಲಿ ನೆರವೇರಿಸಲ್ಪಡುತ್ತದೆ.

**ಮುಸ್ಲಿಮರು ಕಅಬಾವನ್ನು ಆರಾಧಿಸುತ್ತಾರೆಯೇ?**

ಇಲ್ಲ. ಮುಸ್ಲಿಮರು ಸರ್ವಲೋಕಗಳ ಸೃಷ್ಟಿಕರ್ತನಾದ ಅಲ್ಲಾಹನನ್ನು ಮಾತ್ರ ಆರಾಧಿಸುತ್ತಾರೆ. ಕಅಬಾ ಒಂದು ಸೃಷ್ಟಿಯಾಗಿದೆ. ಏಕದೇವಾರಾಧನೆಗಾಗಿ ನಿರ್ಮಾಣವಾದ ಮೊದಲು ಭವನವೆಂಬ ನೆಲೆಯಲ್ಲಿ ಮುಸ್ಲಿಮರು ಕಅಬಾವನ್ನು ಗೌರವಿಸುತ್ತಾರೆ. ಹಜ್ಜ್‌ನ ಸಂದರ್ಭದಲ್ಲಿ ಕಅಬಾದ ಸುತ್ತಲೂ ಪ್ರದಕ್ಷಿಣೆ ಬರುವುದು ಕಅಬಾದ ಪ್ರಾರ್ಥನೆಯಲ್ಲಿ ಒಳಪಡುವುದಿಲ್ಲ. ಕಅಬಾಕ್ಕೆ ಅಭಿಮುಖವಾಗಿ ನಿಂತುಕೊಂಡು ನಿರ್ವಹಿಸಲ್ಪಡುವ ನಮಾಝ್‌ನ ಸ್ಥಿತಿಯೂ ಇದಕ್ಕಿಂತ ಭಿನ್ನವಲ್ಲ. ಕಅಬಾವನ್ನು ಆರಾಧಿಸುವ ಹಾಗೂ ಅದರೊಂದಿಗೆ ಪ್ರಾರ್ಥಿಸುವವನು ಇಸ್ಲಾಮಿಕ್ ವೃತ್ತದಿಂದ ಪಥಭ್ರಷ್ಟನಾಗುತ್ತಾನೆ.

**ಒಳಿತು-ಕೆಡುಕುಗಳ ಕುರಿತು ಇಸ್ಲಾಮಿನ ದೃಷ್ಟಿಕೋನವೇನು?**

ಮನುಷ್ಯರಿಗೆ ಒಳಿತು ಮತ್ತು ಕೆಡುಕುಗಳನ್ನು ಸ್ಪಷ್ಟವಾಗಿ ಬೇರ್ಪಡಿಸಿ ತಿಳಿಯಲು ಸಾಧ್ಯವಿಲ್ಲ. ಒಳಿತು ಮತ್ತು ಕೆಡುಕುಗಳನ್ನು ತಿಳಿಸಿಕೊಡುವ ಸಲುವಾಗಿಯೇ ಸರ್ವಶಕ್ತನು ಪ್ರವಾದಿಗಳನ್ನು ನಿಯೋಗಿಸಿದನು. ಮುಹಮ್ಮದ್ (ಸ)ರು ಪ್ರವಾದಿಗಳ ಪೈಕಿ ಅಂತಿಮ ಸಂದೇಶವಾಹಕರಾಗಿದ್ದಾರೆ.

ಹೀಗಿರುವಾಗ ಮುಹಮ್ಮದ್ (ಸ)ರ ನಂತರದ ಜನರ ಮಟ್ಟಿಗೆ ಪ್ರವಾದಿಯ ಜೀವನ ಹಾಗೂ ಅವರಿಗೆ ಅವತೀರ್ಣಗೊಳಿಸಲ್ಪಟ್ಟ ಕುರ್‌ಆನ್ ಒಳಿತು-ಕೆಡುಕುಗಳ ಮಾನದಂಡವಾಗಿದೆ. ಪ್ರತಿಯೊಂದು ವಿಷಯದಲ್ಲಿರುವ ಒಳಿತು ಮತ್ತು ಕೆಡುಕುಗಳನ್ನು ತಿಳಿಯಲು ಕುರ್‌ಆನ್ ಮತ್ತು ಮುಹಮ್ಮದ್ (ಸ) ರ ಜೀವನದ ಆದರ್ಶವನ್ನು ನೋಡಿದರೆ ಸಾಕು.

"ಎರಡು ಕಾರ್ಯಗಳು ಸತ್ಯವಿಶ್ವಾಸಿಗಳಲ್ಲಿ ಒಗ್ಗೂಡಲಾರದು. ಅದು ಜಿಪುಣತೆ ಮತ್ತು ದುರ್ಗುಣ"

'ದ್ರೋಹಿ, ಜಿಪುಣ ಮತ್ತು ಮಾಡಿದ ಉಪಕಾರಗಳನ್ನು ಆಡಿಕೊಳ್ಳುವವರು ಸ್ವರ್ಗದಲ್ಲಿ ಪ್ರವೇಶಿಸಿಸಲಾರರು"

'ಕೋಪ ಸೈತಾನನ ಸ್ವಭಾವವಾಗಿದೆ."

'ಮೋಸಗಾರ ಸ್ವರ್ಗ ಪ್ರವೇಶಿಸಲಾರ'

"ನಾಲ್ಕು ಕಾರ್ಯಗಳು ಯಾರಲ್ಲಿದೆಯೋ ಅವನು ಅಪ್ಪಟ ಕಪಟಿಯಾಗಿದ್ದಾನೆ. ಈ ಪೈಕಿ ಒಬ್ಬನಲ್ಲಿ ಯಾವುದಾದರೊಂದು ಕಾರ್ಯವಿದ್ದರೆ ಅವನು ಅದನ್ನು ತೊರೆಯುವ ತನಕ ಕಾಪಟ್ಯದ ಒಂದು ಲಕ್ಷಣ ಆತನಲ್ಲಿ ಬಾಕಿಯಾಗಿ ಉಳಿಯುತ್ತದೆ. ವಿಶ್ವಾಸವಿರಿಸಿದರೆ ವಂಚಿಸುವುದು, ಮಾತನಾಡುವಾಗ ಸುಳ್ಳಾಡುವುದು, ವಾಗ್ಧಾನ ಮಾಡಿದರೆ ಉಲ್ಲಂಘಿಸುವುದು, ಜಗಳಕ್ಕೆ ನಿಂತರೆ ಬೈಯ್ಗುಳವನ್ನು ಪ್ರಯೋಗಿಸುವುದು ಆ ನಾಲ್ಕು ಕಾರ್ಯಗಳಾಗಿವೆ.

'ನಿನ್ನ ಸಹೋದರನು ನಿನ್ನ ಮೇಲೆ ವಿಶ್ವಾಸವಿರಿಸುವ ಒಂದು ಕಾರ್ಯದ ಕುರಿತು ನೀನು ಸುಳ್ಳಾಡಿದರೆ ಅದು ಅಪ್ಪಟ ವಂಚನೆಯಾಗಿದೆ.

- ಪ್ರವಾದಿ ಮುಹಮ್ಮದ್(ಸ)

**ಮುಸ್ಲಿಮರ ಸ್ವಭಾವ ವೈಶಿಷ್ಟ್ಯತೆಗಳು ಯಾವುದು?**

ಕುರ್‌ಆನ್ ಮತ್ತು ಪ್ರವಾದಿ ವಚನಗಳು ಮುಸ್ಲಿಮನ ಕಾಪಟ್ಯ, ಅಸೂಯೆ, ಅತ್ಯಾಶೆ, ವಿದ್ವೇಷ, ವಂಚನೆ, ದುಂದಾವೆಚ್ಚ, ಜಿಪುಣತೆ, ಅಹಂಕಾರ, ಕೃತಕತೆ, ದರ್ಪ, ಪರಿಹಾಸ್ಯ ಮಾಡುವುದು, ಸುಳ್ಳು ಹೇಳುವುದು, ಮೋಸ, ಪರದೂಷಣೆ, ಮುಂಗೋಪ ಮೊದಲಾದ ಸ್ವಭಾವಗಳಿಂದ ಮುಕ್ತವಾಗಬೇಕೆಂದು ಹೇಳುತ್ತದೆ.

'ಜೀವಿಸುತ್ತಿರುವ ಕಾಲದಲ್ಲಿ ಮಾಡುವ ಒಂದು ದಿರ್ಹಮ್ ದಾನವು ಮರಣಹೊಂದುವ ವೇಳೆಯಲ್ಲಿ ಮಾಡುವ ನೂರು ದಿರ್ಹಮ್ ದಾನಕ್ಕಿಂತ ಅದೆಷ್ಟೋ ಪಾಲು ಉತ್ತಮ'

'ನೀಡಿದ ದಾನವನ್ನು ಮರಳಿ ಪಡೆಯುವವನು ಮಾಡಿದ ವಾಂತಿಯನ್ನು ನೆಕ್ಕುವ ನಾಯಿಯಂತಿರುವನು'

ಶ್ರೀಮಂತರನ್ನು ಮಾತ್ರ ಆಮಂತ್ರಿಸಿ ಬಡವರನ್ನು ಕಡೆಗಣಿಸುವ ಔತಣಕೂಟದ ಆಹಾರ ತುಂಬಾ ಕೆಟ್ಟದಾಗಿದೆ.'

- ಪ್ರವಾದಿ ಮುಹಮ್ಮದ್(ಸ)

**ಆಹಾರದ ಕಾರ್ಯದಲ್ಲಿ ಇಸ್ಲಾಮಿನ ನಿಲುವು :** ಅನ್ನಪಾನೀಯಗಳನ್ನು ವಸ್ತುಶಃ ತೊರೆದು ಮೋಕ್ಷ ಪಡೆಯಬೇಕೆಂಬ ನಿಲುವಿನೊಂದಿಗೆ ಇಸ್ಲಾಮ್‌ಗೆ ಸಹಮತವಿಲ್ಲ. ಎಲ್ಲಾ ಶುದ್ಧ

ಅನ್ನಪಾನೀಯಗಳನ್ನು ಅನುಮತಿಸುವುದರೊಂದಿಗೆ, ಈ ರಂಗದಲ್ಲಿ ಅಮಿತತ್ವ ಸಲ್ಲದೆಂದು ಇಸ್ಲಾಮ್ ವಿಧಿಸಿದೆ. ಶವ, ಹಂದಿಮಾಂಸ, ರಕ್ತ, ಮದ್ಯ, ದೇವೇತರರ ಹೆಸರಲ್ಲಿ ಕೊಯ್ಯಲ್ಪಟ್ಟದ್ದು ಮುಂತಾದ ನಿಷಿದ್ಧಗೊಳಿಸಲಾದ ಅನ್ನಪಾನೀಯಗಳಿಂದ ಸಂಪೂರ್ಣವಾಗಿ ದೂರವಿರುವವನೇ ನೈಜ ಮುಸ್ಲಿಮ್.

"ಕರುಣೆಯು ಹತಭಾಗ್ಯನಿಂದ ಮಾತ್ರ ತೆಗೆಯಲ್ಪಡುತ್ತದೆ'

'ಒಬ್ಬನು ತನ್ನ ಮಿತ್ರನ ಅನುಪಸ್ಥಿತಿಯಲಿ ಆತನ ಅಭಿಮಾನ ಸಂರಕ್ಷಣೆಗಾಗಿ ಪ್ರಯತ್ನಿಸಿದರೆ ' ಅವನನ್ನು ನರಕ ವಿಮುಕ್ತಗೊಳಿಸುವುದು ಅಲ್ಲಾಹನ ಬಾಧ್ಯತೆಯಾಯಿತು.'

'ಸೃಷ್ಟಿಗಳು ಅಲ್ಲಾಹನ ಅಶ್ರಿತರು. ತನ್ನ ಅಶ್ರಿತರಿಗೆ ಉಪಕಾರ ಮಾಡುವವನು ಅಲ್ಲಾಹನ ಅತ್ಯಂತ ಸಂಪ್ರೀತ ದಾಸನು'

'ಲಜ್ಜೆ ಗುಣವನ್ನಲ್ಲದೆ ಬೇರೇನನ್ನೂ ದಯಪಾಲಿಸುವುದಿಲ್ಲ'

ಪುಣ್ಯವು ಸದ್ಗುಣವಾಗಿದೆ. ನಿನ್ನ ಮನಸ್ಸಿನಲ್ಲಿ ಸಂಶಯ ಉದ್ಭವಿಸುವಂತೆ ಮಾಡುವ ಹಾಗೂ ಜನರು ಮೆಚ್ಚದ ನೀನು ಮಾಡುತ್ತಿರುವ ಕಾರ್ಯವು ಪಾಪವಾಗಿದೆ.

ಸತ್ಯವಿಶ್ವಾಸಿ ಸಾತ್ವಿಕ ಹಾಗೂ ಗೌರವಾನ್ವಿತನಾಗಿರುವನು. ದೇವದಿಕ್ಕಾರಿ ವಂಚಕ ಹಾಗೂ ಅಗೌರವಾನ್ವಿತನಾಗಿರುವನು

'ಮಲ್ಲ ಯುದ್ಧದಲ್ಲಿ ಪ್ರತಿಸ್ಪರ್ಧಿಯನ್ನು ಕೆಡುಹುವ ಜಟ್ಟಿ ಬಲಶಾಲಿಯಲ್ಲ. ಬದಲಾಗಿ ಕೋಪಿಸಿಕೊಂಡಾಗ ಮನಸ್ಸನ್ನು ನಿಯಂತ್ರಿಸುವವನೇ ಬಲಶಾಲಿ.

ಮಾರಾಟಮಾಡುವ, ಖರೀದಿಸುವ ಹಾಗೂ ನೀಡಿದ ಸಾಲವನ್ನು ಮರಳಿ ಕೇಳುವ ವೇಳೆಯಲ್ಲಿ ಉದಾರ ಮನೋಭಾವ ತೋರಿಸುವ ವ್ಯಕ್ತಿಯ ಮೇಲೆ ಅಲ್ಲಾಹನ ಕರುಣೆಯಿರಲಿ.

'ಅಕ್ರಮಿ ಆಡಳಿತಗಾರನ ಮುಂದೆ ನ್ಯಾಯವಾದ ಮಾತುಗಳನ್ನಾಡುವುದು ಅತ್ಯಂತ ಶ್ರೇಷ್ಠವಾದ ಹೋರಾಟವಾಗಿದೆ"

'ನಾನು ಉತ್ತಮ ಸ್ವಭಾವಗಳ ಪೂರ್ತೀಕರಣಕ್ಕಾಗಿ ನಿಯೋಜಿಸಲ್ಪಟ್ಟಿದ್ದೇನೆ."

"ಅಲ್ಲಾಹನು ನಿಮ್ಮ ರೂಪ ಅಥವಾ ಸಂಪತ್ತನ್ನು ನೋಡುವುದಿಲ್ಲ. ಅವನು ನೋಡುವುದು ನಿಮ್ಮ ಮನಸ್ಸು ಮತ್ತು ಪ್ರವೃತ್ತನೆಯನ್ನಾಗಿದೆ.

- ಪ್ರವಾದಿ ಮುಹಮ್ಮದ್(ಸ)

**ವಸ್ತ್ರಧಾರಣೆಯ ಕುರಿತು ಇಸ್ಲಾಮಿನ ವಿಧಿಯೇನು?**

ಅಲ್ಲಾಹನು ನಿನಗೆ ಸಂಪತ್ತು ದಯಪಾಲಿಸಿದ್ದರೆ ಆ ಅನುಗ್ರಹವನ್ನು ಅವನು ನಿನ್ನಲ್ಲಿ ದರ್ಶಿಸುವಂತಾಗಲಿ.

ನಿನಗಿಷ್ಠವಾದುದನ್ನು ಭುಜಿಸು. ನಿನಗಿಷ್ಟವಾದುದನ್ನು ಧರಿಸು. ಆದರೆ ದರ್ಪ ಮತ್ತು ಅಹಂಕಾರ ನಿನ್ನಿಂದ ಪ್ರದರ್ಶನವಾಗದಿರಲಿ. ಆಡಂಬರದಲ್ಲಿ ಮುಳುಗದಿರು. ಆಡಂಬರದ ಜೀವನ ದೇವನ ದಾಸರಿಗೆ ಭೂಷಣವಲ್ಲ.

- ಪ್ರವಾದಿ ಮುಹಮ್ಮದ್ (ಸ)

ವಸ್ತ್ರವು ಅಲಂಕಾರ ಮತ್ತು ನಗ್ನತೆ ಮರೆಮಾಚಲಿರುವಂತದ್ದಾಗಿದೆ. ವಸ್ತ್ರಧಾರಣೆಯಲ್ಲಿ ಆಡಂಭರತೆ ಮತ್ತು ಅಹಂಕಾರವಿರಬಾರದು. ಸ್ತ್ರೀಪುರುಷರೆಲ್ಲರೂ ಗೌರವಾನ್ವಿತವಾಗಿ ಉಡುಗೆ ತೊಡಬೇಕೆಂದು ಇಸ್ಲಾಮ್ ಕಲಿಸಿದೆ. ನಗ್ನತೆ ಮರೆಮಾಚುವುದು ವಸ್ತ್ರಧಾರಣೆಯ ಪ್ರಧಾನ ಉದ್ದೇಶವಾಗಿದೆ. ಸ್ತ್ರೀ-ಪುರುಷರು ಪರಸ್ಪರ ಲೈಂಗಿಕ ಭಾವನೆಗಳನ್ನು ಕೆರಳಿಸುವ ರೀತಿ ವಸ್ತ್ರ ಧರಿಸಬಾರದು. ಸ್ತ್ರೀಯರು ಮುಖ ಮತ್ತು ಮುಂಗೈಯನ್ನು ಹೊರತುಪಡಿಸಿ ದೇಹದ ಉಳಿದ ಎಲ್ಲಾ ಭಾಗಗಳನ್ನು ಮರೆಮಾಚಬೇಕು. ಆಕೆಯ ಪಾವಿತ್ರ್ಯತೆಯನ್ನು ಕಾಪಾಡುವುದು ಹಾಗೂ ಅಕ್ರಮಿಸಲ್ಪಡುವ ಪರಿಸ್ಥಿತಿ ಸಂಜಾತವಾಗದಂತೆ ತಡೆಯುವುದು ಈ ವಸ್ತ್ರಧಾರಣೆಯ ಉದ್ದೇಶವಾಗಿದೆ.

**ಮನರಂಜನೆಯ ಕುರಿತು ಇಸ್ಲಾಮ್ ಏನು ಹೇಳುತ್ತದೆ?**

ಮಾನಸಿಕ ಮತ್ತು ದೈಹಿಕ ಉಲ್ಲಾಸಕ್ಕಾಗಿ ಮನರಂಜನೆಯನ್ನು ಅನುಮತಿಸುವ ಇಸ್ಲಾಮ್ ಅದರಲ್ಲಿ ಮೇರೆ ಮೀರಬಾರದೆಂದು ವಿಧಿಸಿದೆ. ಜನರನ್ನು ದೇವಪ್ರಜ್ಞೆಯಿಂದ ತಡೆಯುವ ಹಾಗೂ ಅವರನ್ನು ನೈತಿಕ ಅಧಃಪತನಕ್ಕೆ ಕೊಂಡೊಯ್ಯುವ ಎಲ್ಲಾ ಮನೋರಂಜನೆಗಳನ್ನು ಇಸ್ಲಾಮ್ ವಿರೋಧಿಸುತ್ತದೆ.

**ವಿವಾಹದ ಕುರಿತು ಇಸ್ಲಾಮಿನ ದೃಷ್ಟಿಕೋನ ಯಾವುದು?**

ಮಾನವ ಸಹಜವಾದ ಲೈಂಗಿಕಾಸಕ್ತಿಯ ಶಮನ ವಿವಾಹದ ಮೂಲಕ ಮಾತ್ರವಾಗಿರಬೇಕೆಂದು ಇಸ್ಲಾಮ್ ಆದೇಶಿಸುತ್ತದೆ. ವಿವಾಹವು ಒಂದು ಪುಣ್ಯಕರ್ಮವಾಗಿದೆ. ಬ್ರಹ್ಮಚರ್ಯೆಯನ್ನು ಇಸ್ಲಾಮ್ ಪ್ರಬಲವಾಗಿ ವಿರೋಧಿಸಿದೆ. ಇಸ್ಲಾಮ್ ವಿವಾಹವನ್ನು ಒಂದು ಪವಿತ್ರ ಒಪ್ಪಂದವೆಂದು ಪರಿಗಣಿಸುತ್ತದೆ. ವೈವಾಹಿಕ ಬದುಕಿನಲ್ಲಿ ಸಂಗಾತಿಗಳಿಬ್ಬರು ಸ್ವೀಕರಿಸಬೇಕಾದ ವಿಧಿನಿಷೇಧಗಳನ್ನು ಇಸ್ಲಾಮ್ ಸೂಚಿಸಿದೆ. ಈ ವಿಧಿನಿಷೇಧಿಗಳನ್ನು ಅನುಸರಿಸುವ ಮೂಲಕ ಸಂತೃಪ್ತ ದಾಂಪತ್ಯ ಜೀವನವು ಸಾಧ್ಯವಾಗುತ್ತದೆ. ಮಾತ್ರವಲ್ಲದೆ, ಮರಣಾನಂತರ ಜೀವನದಲ್ಲಿಯೂ ಶಾಂತತೆ ಲಭಿಸುವುದು.

**"ನೀವು ಸುಖಶಾಂತಿ ಪಡೆಯಿರೆಂದು ನಿಮ್ಮಿಂದಲೇ ನಿಮಗೆ ಸಂಗಾತಿಗಳನ್ನು ಸೃಷ್ಟಿಸಿರುವುದು ಆತನ ನಿದರ್ಶನಗಳಲ್ಲಿ ಒಂದಾಗಿದೆ. ಆತನು ನಿಮ್ಮೊಳಗೆ ಪ್ರೇಮವನ್ನೂ, ದಯೆಯನ್ನೂ ಉಂಟು ಮಾಡಿದನು. ನಿಸ್ಸಂದೇಹವಾಗಿಯೂ ಯೋಚಿಸುವ ಜನರಿಗೆ ಇದರಲ್ಲಿ ದೃಷ್ಟಾಂತಗಳಿವೆ.**

**ಪವಿತ್ರ ಕುರ್‌ಆನ್ 30 21**

**ಇಸ್ಲಾಮಿನಲ್ಲಿ ವಿವಾಹ ಹೇಗೆ ನೆರವೇರುತ್ತದೆ?**

ಇಸ್ಲಾಮಿನಲ್ಲಿ ವಿವಾಹವು ಸ್ತ್ರೀಯ ಅನುಮೋದನೆಯೊಂದಿಗೆ ಆಕೆಯ ತಂದೆ ಅಥವಾ ಆಕೆಯನ್ನು ಸಂರಕ್ಷಿಸುತ್ತಿರುವ ಪುರುಷರು ವರನಿಗೆ ಒಪ್ಪಿಸಿ ಅವನು ಅದನ್ನು ಅನುಮೋದಿಸುವ ಸರಳ ಆಚಾರವಾಗಿದೆ. ವಿವಾಹದ ಸಂದರ್ಭದಲ್ಲಿ ಪುರುಷನು ಮಹಿಳೆಗೆ ವಿವಾಹಮೌಲ್ಯ (ಮೆಹ್ರ್) ಕೊಡಬೇಕೆಂದು ಇಸ್ಲಾಮ್ ಆದೇಶಿಸುತ್ತದೆ.

"ಇಹದಲ್ಲಿರುವುದೆಲ್ಲವೂ ಅನುಭವಿಸಲಿಕ್ಕಿರುವಂತದ್ದು. ಅತ್ಯುತ್ತಮ ಸ್ತ್ರೀ ಅತ್ಯುತ್ತಮ ಅನುಭವವಾಗಿದ್ದಾಳೆ"

- ಪ್ರವಾದಿ ಮುಹಮ್ಮದ್(ಸ)

**ಕುಟುಂಬದಲ್ಲಿ ಸ್ತ್ರೀ ಪುರುಷರ ಬಾಧ್ಯತೆಗಳೇನು?**

ದಾಂಪತ್ಯ ಜೀವನದಲ್ಲಿ ಸ್ತ್ರೀ ಪುರುಷರ ಬಾಧ್ಯತೆ ಮತ್ತು ಹಕ್ಕುಗಳು ಭಿನ್ನವಾಗಿದ್ದು, ಅದೇ ಸಂದರ್ಭದಲ್ಲಿ ಪರಸ್ಪರ ಪೂರಕವೂ ಆಗಿದೆ. ಗೃಹಕೃತ್ಯ ಹಾಗೂ ಸಂತಾನಪರಿಪಾಲನೆ ಮಹಿಳೆಯ ಹೊಣೆಗಾರಿಕೆಯಾಗಿದೆ. ಗೃಹ ಸಂರಕ್ಷಣೆ ಹಾಗೂ ಜೀವನಾಧಾರವನ್ನು ಒದಗಿಸುವುದು ಪುರುಷನ ಕರ್ತವ್ಯವಾಗಿದೆ. ಮಹಿಳೆಯ ಮಾತೃತ್ವವನ್ನು ಗೌರವಿಸುವ ಇಸ್ಲಾಮ್ ಆಕೆ ಮತ್ತು ಮಕ್ಕಳನ್ನು ಸಲಹುವ ಸಂಪೂರ್ಣ ಹೊಣೆಗಾರಿಕೆಯನ್ನು ಪುರುಷನಿಗೆ ಒಪ್ಪಿಸಿದೆ.

"ಮನುಷ್ಯನು ಸಂಗ್ರಹಿಸಿಡುವುದ ಪೈಕಿ ಅತ್ಯುತ್ತಮವಾದುದನ್ನು ನಾನು ನಿಮಗೆ ತಿಳಿಸಲೇ? ಓರ್ವ ಉತ್ತಮ ಪತ್ನಿ ಹಾಗೂ ಪತಿಯ ಅನುಪಸ್ಥಿತಿಯಲ್ಲಿ ಆತನಿಗೆ ಸೇರಿದ ಹಕ್ಕುಗಳನ್ನೆಲ್ಲ ಸಂರಕ್ಷಿಸಿಡುವ ಪತ್ನಿ"

- ಪ್ರವಾದಿ ಮುಹಮ್ಮದ್(ಸ)

**ಬಹುಪತ್ನಿತ್ವದ ಕುರಿತು ಇಸ್ಲಾಮಿನ ದೃಷ್ಟಿಕೋನವೇನು?**

ಇಸ್ಲಾಮ್ ಬಹುಪತ್ನಿತ್ವವನ್ನು ಅನುಮತಿಸುತ್ತದೆ. ಆದರೆ ಪತ್ನಿಯರ ಮಧ್ಯೆ ನ್ಯಾಯ ಪಾಲಿಸಬೇಕೆಂಬ ಶರತ್ತನ್ನಿಟ್ಟಿದೆ. ನಾಲ್ಕಕ್ಕಿಂತ ಅಧಿಕ ವಿವಾಹವಾಗುವಂತಿಲ್ಲ. ವಿವಾಹೇತರ ಲೈಂಗಿಕ ಸಂಬಂಧ ಮ್ಲೇಚ್ಛ ಹಾಗೂ ಪಾಪವಾಗಿದೆ. ಯಾವ ಕಾರಣಕ್ಕೂ ಪರಸ್ತ್ರೀಯಿಂದ ಸುಖ ಪಡೆಯುವುದು ಸಲ್ಲದೆಂದು ಆಜ್ಞಾಪಿಸಿರುವ ಇಸ್ಲಾಮ್ ಏಕ ಪತ್ನಿಯಿಂದ ಲೈಂಗಿಕ ಬಯಕೆಯನ್ನು ಶಮನಗೊಲಿಸಲು ಸಾಧ್ಯವಾಗದ ಪುರುಷರು ಬಹುಪತ್ನಿತ್ವವನ್ನು ಕೈಗೊಳ್ಳಬಹುದೆಂದು ಅನುಮತಿಸಿದೆ. ಒಂದಕ್ಕಿಂತ ಹೆಚ್ಚು ಮಹಿಳೆಯರೊಂದಿಗೆ ಲೈಂಗಿಕ ಸಂಪರ್ಕದಲ್ಲಿ ಏರ್ಪಟ್ಟು ತದನಂತರ ಅವರೊಂದಿಗೆ ತನಗಿರುವ ಬಾಧ್ಯತೆಯನ್ನು ಆಗಲೇ ಮುಗಿಸುವ ನೀಚ ಸಂಪ್ರದಾಯವನ್ನು ಇಸ್ಲಾಮ್ ವಸ್ತುತಃ ವಿರೋಧಿಸುತ್ತದೆ. ಅನಿವಾರ್ಯ ಸಂದರ್ಭಗಳಲ್ಲಿ ಒಂದಕ್ಕಿಂತ ಹೆಚ್ಚು ವಿವಾಹವಾಗಿ ಪತ್ನಿಯರ ಮಧ್ಯೆ ನ್ಯಾಯ ಪಾಲಿಸಿ ಅವರಿಗೆ ಸಲ್ಲತಕ್ಕ ಹಕ್ಕುಗಳನ್ನು ಕೊಟ್ಟು ಅವರನ್ನು ಸಮಾನವಾಗಿ ನೋಡುವ ಪರಿಶುದ್ಧ ವ್ಯವಸ್ಥೆಯನ್ನು ಇಸ್ಲಾಮ್ ಅನುಮತಿಸುತ್ತದೆ. ಬಹುಪತ್ನಿತ್ವ ಒಂದು ವೈಯಕ್ತಿಕ ಅವಶ್ಯಕತೆಯಾಗುವಂತೆ ಸಾಮಾಜಿಕ ಅನಿವಾರ್ಯತೆಯಾಗಿ ಮಾರ್ಪಡುವ ಸಂದರ್ಭಗಳೂ ಇವೆ. ಸಮಾಜದಲ್ಲಿ ಪುರುಷರ ಸಂಖ್ಯೆಗಿಂತ ಮಹಿಳೆಯರ ಸಂಖ್ಯೆ ವರ್ಧಿಸಿದರೆ ಇಸ್ಲಾಮಿನ ಈ ಅನುಮತಿಯನ್ನು ಉಪಯೋಗಿಸುವುದು ಅನಿವಾರ್ಯವಾಗುತ್ತದೆ. ಸಮಾಜದಲ್ಲಿ ಸಾಮಾನ್ಯವಾಗಿ ಪುರುಷರಿಗಿಂತ ಮಹಿಳೆಯರೇ ಹೆಚ್ಚಾಗಿರುತ್ತಾರೆ. (ಇಂದು ಲೋಕದಲ್ಲಿ ಪುರುಷರಿಗಿಂತ ಸುಮಾರು 17 ಕೋಟಿ ಮಹಿಳೆಯರು ಜಾಸ್ತಿಯಿದ್ದಾರೆ) ಯುದ್ಧದ ಸಂದರ್ಭದಲ್ಲಿ ಈ ಅನುಪಾತವು ತುಂಬಾ ಹೆಚ್ಚಾಗುತ್ತದೆ. ಯುದ್ಧದಲ್ಲಿ ಪುರುಷರು ಹತರಾಗುವ ಸಾಧ್ಯತೆ ಜಾಸ್ತಿಯಾಗಿದೆಯಷ್ಟೆ. ಇಂತಹ ಸಂದರ್ಭಗಳಲ್ಲಿ ಬಹುಪತ್ನಿತ್ವವು ಒಂದು ಸಾಮಾಜಿಕ ಅನಿವಾರ್ಯತೆಯಾಗಿ ಮಾರ್ಪಡುತ್ತದೆಯೆಂದು ಪರಿಗಣಿಸಿ ಇಸ್ಲಾಮ್ ಅದಕ್ಕೆ ಅನುಮತಿ ನೀಡಿದೆ.

**ಪತ್ನಿಗೆ ಪತಿಯಿಂದ ದೊರೆಯಬೇಕಾದುದು - ನೀನು ಉಣ್ಣುವುದನ್ನೇ ಆಕೆಗೆ ಉಣಿಸು, ನೀನು ಧರಿಸುವುದನ್ನು ಆಕೆಗೆ ತೊಡಿಸು, ಮುಖಕ್ಕೆ ಹೊಡೆಯುವುದಾಗಲೀ ವಿರೂಪಗೊಳಿಸುವುದಾಗಲೀ ಸಲ್ಲದು. ಮನೆಯಲ್ಲಲ್ಲದೆ ಜಗಳವಾಡಬಾರದು.**

**ಮಹಿಳೆಯರೊಂದಿಗೆ ಉತ್ತಮ ನೆಲೆಯಲ್ಲಿ ವರ್ತಿಸಬೇಕೆಂಬ ನನ್ನ ಉಪದೇಶವನ್ನು ನೀವು ಸ್ವೀಕರಿಸಬೇಕು. ಅವರು ನಿಮ್ಮೊಂದಿಗೆ ಮಾಡಿಕೊಂಡ ಒಪ್ಪಂದ ಪ್ರಕಾರ ನಿಮ್ಮ ಜೊತೆಯಲ್ಲಿದ್ದಾರೆ. ಅವರ ಮೇಲೆ ಇತರ ಯಾವ ಅಧಿಕಾರವೂ ನಿಮಗಿಲ್ಲ. ಅವರು ಸ್ಪಷ್ಟವಾದ ಯಾವುದಾದರೂ ಕೆಟ್ಟ ಪ್ರವೃತ್ತಿಯಲ್ಲಿ ತೊಡಗಿರುವುದರ ಹೊರತು. ಅವರು ಹಾಗೇನಾದರೂ ಮಾಡಿದರೆ ನೀವು ಅವರಿಂದ ದೂರಸರಿದು ಮಲಗಿರಿ. ಗಾಯವಾಗದ ರೀತಿಯಲ್ಲಿ ಹೊಡೆಯಿರಿ. ಅವರು ನಿಮ್ಮನ್ನು ಅನುಸರಿಸಿದರೆ ಅವರ ಮೇಲೆ ಅಕ್ರಮವೆಸಗಲು ದಾರಿ ಹುಡುಕದಿರಿ"**

**- ಪ್ರವಾದಿ ಮುಹಮ್ಮದ್ (ಸ)**

**ವಿವಾಹ ವಿಮೋಚನೆಯ ಕುರಿತು ಇಸ್ಲಾಮ್ ಏನು ಹೇಳುತ್ತದೆ?**

ಇಸ್ಲಾಮ್ ಸುದೃಢ, ಕೌಟುಂಬಿಕ ಸಂಬಂಧವನ್ನು ನೆಲೆ ನಿಲ್ಲಿಸಲು ಅಗತ್ಯವಾದ ನಿರ್ದೇಶನಗಳನ್ನು ನೀಡಿದೆ. ಇವುಗಳನ್ನು ಪಾಲಿಸುವುದರಿಂದ ಕೌಟುಂಬಿಕ ಭದ್ರತೆ ಹಾಗೂ ಸಮಸ್ಯೆಗಳಿಂದ ಮುಕ್ತವಾದ ದಾಂಪತ್ಯ ಜೀವನ ಸಾಧ್ಯವಾಗುತ್ತದೆ. ಆದರೆ ಕುಟುಂಬ ಜೀವನದಲ್ಲಿ ತಲೆದೋರುವ ಅಹಿತಕರ ಘಟನೆಗಳಿಗೆ ಇಸ್ಲಾಮ್ ಕಣ್ಮುಚ್ಚುವುದಿಲ್ಲ. ಅಶಿಸ್ತಿನಿಂದಾಗಿ ಉದ್ಭವಿಸುವ ಅಹಿತಕರ ಘಟನೆಗಳಿಂದ ಕುಟುಂಬವು ಛಿದ್ರವಾಗುವುದನ್ನು ತಡೆಯಲು ಇಸ್ಲಾಮ್ ಪ್ರಾಯೋಗಿಕ ಹಾಗೂ ವೈಜ್ಞಾನಿಕವಾದ ಮೂರು ಮಾರ್ಗಗಳನ್ನು ಮುಂದಿಡುತ್ತದೆ. ಮೊತ್ತ ಮೊದಲು ಉತ್ತಮ ರೀತಿಯಲ್ಲಿ ಉಪದೇಶಿಸಬೇಕು.

**" ಪತ್ನಿಯರಿಗೆ ಹೊಡೆಯುವವನು ಗೌರವಾನ್ವಿತನಲ್ಲ " 'ಪತಿ ತನ್ನೊಂದಿಗೆ ಸಂತೃಪ್ತವಾಗಿರುವ ಸ್ಥಿತಿಯಲ್ಲಿ ಮೃತಪಡುವ ಪ್ರತಿಯೋರ್ವ ಮಹಿಳೆ ಸ್ವರ್ಗ ಪ್ರವೇಶಿಸುತ್ತಾಳೆ. ನಿಮಗೆ ಸ್ತ್ರೀಯರೊಂದಿಗೆ ಕೆಲವು ಬಾಧ್ಯತೆಗಳಿರುವಂತೆ ಪತ್ನಿಯರಿಗೂ ನಿಮ್ಮ ಮೇಲೆ ಕೆಲವು ಬಾಧ್ಯತೆಗಳಿವೆ. ಪತ್ನಿಯು ಅವನೊಂದಿಗೆ ಪ್ರಾಮಾಣಿಕತೆಯಿಂದ ನಡೆದುಕೊಳ್ಳುವುದು, ಆದೇಶಗಳನ್ನು ಅನುಸರಿಸುವುದು, ಅನುಮತಿಯಿಲ್ಲದೆ ಮನೆಯಿಂದ ಹೊರಹೋಗದಿರುವುದು, ಆತನಿಗೆ ಅಪ್ರಿಯವಾದ ವ್ಯಕ್ತಿಗಳಿಗೆ ಮನೆಯೊಳಗೆ ಪ್ರವೇಶಗೊಡದಿರು ವುದು ಇವೆಲ್ಲವೂ ಪತಿಯೊಂದಿಗಿರುವ ಬಾಧ್ಯತೆಗಳಾಗಿವೆ.**

**- ಪ್ರವಾದಿ ಮುಹಮ್ಮದ್(ಸ)**

ನಂತರ ಹಾಸಿಗೆಯಿಂದ ದೂರವಿರಿಸಬೇಕು, ಆಗಲೂ ಸರಿಯಾಗದಿದ್ದರೆ ಲಘುವಾಗಿ ಶಿಕ್ಷಿಸಬೇಕು. ಹೀಗೆ ಶಿಕ್ಷಿಸುವಾಗ ಪ್ರಮುಖ ಅವಯವಗಳಿಗೆ ಹೊಡೆಯಬಾರದು. ಈ ಮೂರು ಮಾರ್ಗಗಳು ಕೂಡಾ ವಿಫಲಗೊಂಡರೆ ಉಭಯತ್ರರ ಮನೆಯವರು ಮಧ್ಯ ಪ್ರವೇಶಿಸಿ ಅವರೀರ್ವರ ನಡುವೆ ರಾಜಿ ಏರ್ಪಡಿಸಲು ಪ್ರಯತ್ನಿಸಬೇಕು. ಆಗಲೂ ಸಮಸ್ಯೆ ಬಗೆಹರಿಸಲ್ಪಡದಿದ್ದರೆ ಗೌರವಾನ್ವಿತ

ರೀತಿಯಲ್ಲಿ ವಿವಾಹ ವಿಮೋಚನೆ ಮಾಡಿಕೊಳ್ಳಲು ಇಸ್ಲಾಮ್ ಅನುಮತಿಸುತ್ತದೆ. ಅನಿವಾರ್ಯ ಸಂದರ್ಭಗಳಲ್ಲಿ ಮಾತ್ರ ವಿವಾಹ ವಿಮೋಚನೆ ಮಾಡಬೇಕೆನ್ನುವುದು ಇಸ್ಲಾಮಿನ ಆಜ್ಞೆಯಾಗಿದೆ.

**ನೀವು ನಿಮ್ಮ ಪತ್ನಿಯರನ್ನು ಜಾನುವಾರುಗಳಂತೆ ಬಳಸಿಕೊಳ್ಳದಿರಿ. ಅವರ ನಡುವೆ ಒಬ್ಬ ಧೂತನಿರಲಿ. ಆ ಧೂತ ಚುಂಬನ ಮತ್ತು ಮಾತುಕತೆಯಾಗಿದೆ.**

**ಪರಸ್ಪರ ಜತೆಗೂಡಿದ ನಂತರ ಪತ್ನಿಯ ರಹಸ್ಯಗಳನ್ನು ಬಹಿರಂಗಪಡಿಸುವವನು ಪುನರುತ್ಥಾನದ ದಿನದಂದು ಅಲ್ಲಾಹನ ಸನ್ನಿಧಿಯಲ್ಲಿ ಅತ್ಯಂತ ಧಾರುಣ ಅವಸ್ಥೆಯಲ್ಲಿರುವನು.'**

**ಪ್ರವಾದಿ ಮುಹಮ್ಮದ್(ಸ)**

**ವಿವಾಹ ವಿಮೋಚನೆಯ ಅಧಿಕಾರ ಯಾರಿಗೆ?**

ಸಂಗಾತಿಯೊಂದಿಗೆ ಯಾವ ನೆಲೆಯಲ್ಲಿಯೂ ಒಟ್ಟಾಗಿ ಬದುಕುವುದು ಅಸಾಧ್ಯವೆಂದು ಖಚಿತಪಟ್ಟಾಗ ಸ್ತ್ರೀ ಮತ್ತು ಪುರುಷನು ವಿವಾಹ ವಿಮೋಚನೆ ಮಾಡಿಕೊಳ್ಳಬಹುದಾಗಿದೆ. ಉಭಯತ್ರರು ವಿವಾಹ ವಿಮೋಚಿತರಾಗುವ ರೀತಿಯಲ್ಲಿ ಅಲ್ಪ ಸ್ವಲ್ಪ ವ್ಯತ್ಯಾಸ ಮಾತ್ರವಿದೆ.

**ಅಲ್ಲಾಹನು ಅನುಮತಿಸಿದ ಕಾರ್ಯಗಳಲ್ಲಿ ಅವನಿಗೆ ಅತ್ಯಂತ ಅಪ್ರಿಯವಾದುದು ವಿವಾಹ ವಿಮೋಚನೆಯಾಗಿದೆ.**

**ಪ್ರವಾದಿ ಮುಹಮ್ಮದ್(ಸ)**

**ಸಂತಾನ ಪರಿಪಾಲನೆಯ ಕುರಿತು ಇಸ್ಲಾಮ್ ಏನು ಹೇಳುತ್ತದೆ?**

ಕುಟುಂಬ ಜೀವನದ ಅನುಗ್ರಹಗಳಾದ ಮಕ್ಕಳನ್ನು ಐಹಿಕ ಮತ್ತು ಮರಣಾನಂತರ ಜೀವನದಲ್ಲಿ ಉಪಕಾರಪ್ರದರಾಗುವಂತೆ ಬೆಳೆಸುವುದು ಮಾತಾಪಿತರ ಕರ್ತವ್ಯವಾಗಿದೆ. ಮಾತಾಪಿತರು ಮಕ್ಕಳ ಭೌತಿಕ ಮತ್ತು ಆಧ್ಯಾತ್ಮಿಕ ಕಾರ್ಯಗಳನ್ನು ಗಮನಿಸಬೇಕಾಗಿದೆ. ಅವರನ್ನು ಪ್ರೀತಿಸುತ್ತಲೂ ಗೌರವಿಸುತ್ತಲೂ ಇರಬೇಕು. ಅದರ ಜತೆಗೆ ಒಳಿತಿಗೆ ಅವರನ್ನು ಪ್ರೋತ್ಸಾಹಿಸಿ, ಕೆಡುಕಿನಿಂದ ತಡೆಯಬೇಕು. ಮಕ್ಕಳಿಂದ ಸಂಭವಿಸುವ ತಪ್ಪುಗಳಿಗೆ ಚಿಕ್ಕ ಪ್ರಮಾಣದ ಶಿಕ್ಷೆ ನೀಡಲು ಇಸ್ಲಾಮ್ ಅನುಮತಿಸುತ್ತದೆ. ಆದರೆ ಅದು ಯಾವತ್ತೂ ಅವರ ಅಭಿಮಾನಕ್ಕೆ ಭಂಗವುಂಟುಮಾಡುವ ರೀತಿಯಲ್ಲಿರಬಾರದು. ಮಕ್ಕಳೊಂದಿಗೆ ಸಮಾನವಾಗಿ ವರ್ತಿಸಬೇಕು. ಗಂಡು ಮತ್ತು ಹೆಣ್ಣು ಮಕ್ಕಳನ್ನು ಯಾವುದೇ ತಾರತಮ್ಯವಿಲ್ಲದೆ ಸಮಾನವಾಗಿ ಬೆಳೆಸಬೇಕೆನ್ನುವುದು ಇಸ್ಲಾಮಿನ ಅನುಶಾಸನವಾಗಿದೆ.

**'ನೀವೆಲ್ಲರೂ ಆಡಳಿತಗಾರರಾಗಿರುವಿರಿ. ನೀವು ನಿಮ್ಮ ಪ್ರಜೆಗಳ ಕುರಿತು ವಿಚಾರಣೆಗೊಳಗಾಗುತ್ತೀರಿ. ಪ್ರತಿಯೋರ್ವ ಪುರುಷನು ತನ್ನ ಮನೆಯ ಆಡಳಿತಗಾರನಾಗಿದ್ದಾನೆ. ಮಹಿಳೆ ಪತಿಗ್ರಹ ಹಾಗೂ ಸಂತಾನಗಳ ಮುಖ್ಯಸ್ಥೆ. ನಿಮ್ಮಲ್ಲಿ ಎಲ್ಲರೂ ಅವರವರ ಪ್ರಜೆಗಳಿಗೆ ಹೊಣೆಗಾರರಾಗಿರುವಿರಿ"**

**- ಪ್ರವಾದಿ ಮುಹಮ್ಮದ್(ಸ)**

**ಮಾತಾಪಿತರೊಂದಿಗಿನ ವರ್ತನೆಯಲ್ಲಿ ಗಮನಿಸಬೇಕಾದ ಕಾರ್ಯಗಳೇನು?**

**'ನನ್ನನ್ನಲ್ಲದೆ ನೀವು ಇನ್ನಾರನ್ನೂ ಆರಾಧಿಸಬಾರದು ಹಾಗೂ ಮಾತಾಪಿತರಿಗೆ ಒಳಿತು ಮಾಡಬೇಕೆಂದು ನಿಮ್ಮ ಪ್ರಭು ತೀರ್ಪು ಕೊಟ್ಟಿರುತ್ತಾನೆ. ಅವರಲ್ಲಿ ಯಾರಾದರೂ ಒಬ್ಬರು ಅಥವಾ ಅವರಿಬ್ಬರೂ ನಿಮ್ಮೆದುರಲ್ಲಿ ವೃದ್ಧಾಪ್ಯೆಗೆ ತಲುಪಿಸಿದರೆ ಅವರೊಂದಿಗೆ ನೀವು ' ಛೆ' ಎಂತಲೂ ಹೇಳಬಾರದು. ಅವರಿಗೆ ಛೀಮಾರಿ ಹಾಕಬಾರದು. ಅವರೊಂದಿಗೆ ನೀವು ಆದರಪೂರ್ವಕವಾಗಿ ಮಾತನಾಡಿರಿ ಮತ್ತು ಅವರಿಗಾಗಿ ಕರುಣೆಯೊಂದಿಗೆ, ವಿನಮ್ರತೆಯೊಂದಿಗೆ ಭುಜವನ್ನು ಬಗ್ಗಿಸಿರಿ ಹಾಗೂ ನೀವು ಹೀಗೆ ಪ್ರಾರ್ಥಿಸಿರಿ : ಪ್ರಭೂ l ತುಂಬಾ ವಾತ್ಸಲ್ಯದೊಂದಿಗೆ ಇವರು ಎಳೆ ಪ್ರಾಯದಲ್ಲಿ ನನ್ನ ಪಾಲನೆ - ಪೋಷಣೆ ಮಾಡಿದರಾದ್ದರಿಂದ ನೀನೂ ಇವರ ಮೇಲೆ ದಯೆತೋರು'**

**ಕುರ್ ಆನ್ 17 : 23, 24**

ಇಸ್ಲಾಮ್ ಸೃಷ್ಟಿಕರ್ತನೊಂದಿಗಿರುವ ಬಾಧ್ಯತೆಯನ್ನು ಹೊರತುಪಡಿಸಿದರೆ ಒಬ್ಬರ ಮೇಲೆ ಅತ್ಯಧಿಕ ಬಾಧ್ಯತೆಯಿರುವುದು ಮಾತಾಪಿತರ ಮೇಲಾಗಿದೆಯೆಂದು ಕಲಿಸುತ್ತದೆ. ಅವರನ್ನು ದಿಕ್ಕರಿಸುವುದು, ನಿರ್ಲಕ್ಷ್ಯಿಸುವುದು, ಅವರ ಆಜ್ಞಾನುಸರಣೆ ಮಾಡದಿರುವುದಿರುವುದನ್ನು ಇಸ್ಲಾಮ್ ಮಹಾಪಾಪವೆಂದು ಪರಿಗಣಿಸುತ್ತದೆ. ಆದರೆ ಮಾತಾಪಿತರು ದೇವನು ವಿರೋಧಿಸಿದ ಕಾರ್ಯಗಳನ್ನು ಮಾಡಲು ಬಲವಂತಪಡಿಸಿದರೆ ಅದನ್ನು ಅನುಸರಿಸಬೇಕಾಗಿಲ್ಲ. ಆದರೆ ಅವರು ಅಮುಸ್ಲಿಮರಾಗಿದ್ದರೂ ಅವರನ್ನು ಸಂರಕ್ಷಿಸುವುದು ಮಕ್ಕಳ ಕರ್ತವ್ಯವಾಗಿದೆ. ವಾರ್ಧಕ್ಯದ ಕಾಲದಲ್ಲಿ ಮಾತಾಪಿತರ ಸಂರಕ್ಷಣೆಯ ಸಂಪೂರ್ಣ ಹೊಣೆ ಮಕ್ಕಳ ಮೇಲಿದೆ. ವೃದ್ಧರಾದ ಮಾತಾಪಿತರನ್ನು ಗದರಿಸುವುದು ಮತ್ತು ಅವರೊಂದಿಗೆ ಕೆಟ್ಟದಾಗಿ ಮಾತನಾಡುವುದನ್ನು ಇಸ್ಲಾಮ್ ಮಹಾಪಾಪವೆಂದು ಸಾರುತ್ತದೆ.

**'ಚಿಕ್ಕವರೊಂದಿಗೆ ಕುರಣೆ ತೋರಿಸದ ಹಾಗೂ ಹಿರಿಯರನ್ನು ಗೌರವಿಸದವನು ನಮ್ಮವನಲ್ಲ.'**

**'ಒಬ್ಬ ತಂದೆ ತನ್ನ ಮಕ್ಕಳಿಗೆ ಶಿಕ್ಷಣಕ್ಕಿಂತಲೂ ಉತ್ತಮವಾದ ಉಡುಗೊರೆಯನ್ನು ಕೊಡಲಾರ.'**

**'ಒಬ್ಬನಿಗೆ ಒಂದು ಹೆಣ್ಣು ಮಗು ಹುಟ್ಟಿದಾಗ (ಇಸ್ಲಾಮ್ ಪೂರ್ವ ಯುಗದಂತೆ ) ಆಕೆಯನ್ನು ಹೂಳದೆ, ನಿಂದಿಸದೆ, ಗಂಡು ಮಕ್ಕಳಿಗೆ ಅವಳಿಗಿಂತ ಹೆಚ್ಚು ಪ್ರಾಮುಖ್ಯತೆ ನೀಡದೆ ಬೆಳೆಸಿದರೆ ಅಲ್ಲಾಹನು ಆತನನ್ನು ಸ್ವರ್ಗಪ್ರವೇಶಗೊಳಿಸುವುದು ಖಚಿತವಾಯಿತು.'**

**- ಪ್ರವಾದಿ ಮುಹಮ್ಮದ್(ಸ)**

**ಇಸ್ಲಾಮ್ ಪ್ರಸ್ತುತಪಡಿಸುವ ಸಮಾಜವು ಹೇಗಿದೆ?**

ಇಸ್ಲಾಮ್ ಜನರೆಲ್ಲರೂ ಏಕದೇವನ ಸೃಷ್ಟಿಗಳಾಗಿದ್ದು ಆತನ ಸಂರಕ್ಷಣೆಯಲ್ಲಿ ಜೀವಿಸುವವರಾಗಿದ್ದಾರೆಂದು ಕಲಿಸುತ್ತದೆ. ಎಲ್ಲರೂ ಒಂದೇ ಪದಾರ್ಥ- ಅವೆ ಮಣ್ಣಿನ ಅಂಶದಿಂದ ಸೃಷ್ಟಿಸಲ್ಪಟ್ಟವರಾಗಿದ್ದಾರೆ. ಮಾನವರೆಲ್ಲರೂ ಒಂದೇ ಮಾತಾಪಿತರ ಆದಮ್ ಮತ್ತು ಹವ್ವಾರ ಸಂತಾನಗಳಾಗಿದ್ದಾರೆ. ಮಾನವನು ಸೃಷ್ಟಿಸಿದ ಉಚ್ಚ-ನೀಚತೆಗಳಿಗೆ ಸೃಷ್ಟಿಕರ್ತನ ಸನ್ನಿಧಿಯಲ್ಲಿ ಯಾವುದೇ

ಸ್ಥಾನವಿಲ್ಲ. ಏಕದೇವನಿಗೆ ಮಾತ್ರ ಸಲ್ಲಿಸುವ ಆರಾಧನೆಯು ಜನರನ್ನು ಪರಸ್ಪರ ಜೋಡಿಸುವ ಶಕ್ತಿಯಾಗಿದೆ.

**'ಅಲ್ಲಾಹನಿಗೆ ಭಾಗಿದಾರರನ್ನು ನಿಶ್ಚಯಿಸುವುದು ಹಾಗೂ ಮಾತಾಪಿತರನ್ನು ದಿಕ್ಕರಿಸುವುದು ಮಹಾಪಾಪವಾಗಿದೆ. ತಂದೆಯ ಮೇಲೆ ಅಪ್ರಿಯತೆ ವ್ಯಕ್ತಪಡಿಸುವುದು ಕೃತಘ್ನತೆಯಾಗಿದೆ.'**

**'ಕೌಟುಂಬಿಕ ಸಂಬಂಧವನ್ನು ಮುರಿಯುವವನು ಸ್ವರ್ಗಪ್ರವೇಶಿಸಲಾರ. ಬಡವನಿಗೆ ದಾನ ನೀಡಿದರೆ ಅದೊಂದು ದಾನವಾಗುತ್ತದೆ. ಆದರೆ ರಕ್ತಸಂಬಂಧಿಕರ ಪೈಕೆ ಯಾರಿಗಾದರೂನೀಡಿದರೆ ಅದು ದಾನದ ಜೊತೆಗೆ ಕುಟುಂಬ ಸಂಬಂಧವನ್ನು ಬೆಳೆಸಿದಂತೆಯೂ ಆಗುತ್ತದೆ.**

**- ಪ್ರವಾದಿ ಮುಹಮ್ಮದ್(ಸ)**

ಅವನ ಮುಂದೆ ಸಾಷ್ಟಾಂಗವೆರಗುವಾಗ ಎಲ್ಲಾ ಸಂಚುಚಿತತೆಗಳು ಧೂಳೀಪಟವಾಗುತ್ತದೆ. ಇಸ್ಲಾಮಿನ ದೃಷ್ಟಿಯಲ್ಲಿ ವಿಶ್ವಾಸದಲ್ಲಿ ಅಧಿಷ್ಠಿತಗೊಂಡಿರುವ ಕರ್ಮಗಳು ಮಾತ್ರ ಮಾನವರನ್ನು ಉತ್ತಮರನ್ನಾಗಿ ಮಾಡುತ್ತದೆ. ಆಗ ಜನ್ಮದತ್ತವಾಗಿ ಲಭಿಸಿದ ಶ್ರೇಷ್ಠತೆಗಳೆಲ್ಲವೂ ನುಚ್ಚು ನೂರಾಗುತ್ತದೆ. ಇಸ್ಲಾಮಿನಲ್ಲಿ ಏಕೈಕ ದೇವ ಮತ್ತು ಅವನ ಸೃಷ್ಟಿಗಳಾದ ಜನರಿದ್ದಾರೆ. ಅಲ್ಲಿ ಶ್ರೀಮಂತ-ಬಡವ, ಸವರ್ಣೀಯ-ಅವರ್ಣೀಯ, ಕುಲಜಾತ-ಕುಲಹೀನ, ಸ್ವದೇಶಿ-ವಿದೇಶಿ ಯಜಮಾನ - ಕಾರ್ಮಿಕರೆಂಬ ತಾರತಮ್ಯವಿಲ್ಲ. ಎಲ್ಲರೂ ಏಕದೇವನ ದಾಸರು. ಅವನ ಮುಂದೆ ಮಾತ್ರ ಸಾಷ್ಟಾಂಗವೆರಗುವವರು. ಇದು ಇಸ್ಲಾಮ್ ಪ್ರಸ್ತುತಪಡಿಸುವ ಸಂಕುಚಿತತೆಗಳಿಲ್ಲದ ಸಾಮಾಜಿಕ ವ್ಯವಸ್ಥೆಯ ಚಿತ್ರಣವಾಗಿದೆ.

**" ಓ ಜನರೇ! ನಿಮ್ಮನ್ನೊಬ್ಬ ಪುರುಷ ಮತ್ತು ಸ್ತ್ರೀಯಿಂದ ನಾವು ಸೃಷ್ಠಿಸಿದೆವು. ನೀವು ಪರಸ್ಪರರನ್ನು ಗುರುತಿಸಲಿಕ್ಕೆಂದು ನಿಮ್ಮನ್ನು ಅನೇಕ ಜನಾಂಗಗಳಾಗಿಯೂ, ವಂಶಗಳಾಗಿಯೂ ಮಾಡಿದೆವು. ನಿಮ್ಮಲ್ಲಿ ಅತ್ಯಧಿಕ (ಅಲ್ಲಾಹನ) ಭಯವುಳ್ಳವನೇ ಅಲ್ಲಾಹನ ದೃಷ್ಠಿಯಲ್ಲಿ ಅತ್ಯಂತ ಮಾನಹನನು - ನಿಶ್ಚಯವಾಗಿಯೂ ಅಲ್ಲಾಹನು ಸರ್ವವನ್ನು ಅರಿಯುವವನೂ, ವಿವರಪೂರ್ಣನೂ ಆಗಿರುತ್ತಾನೆ.**

**ಪವಿತ್ರ ಕುರ್‌ಆನ್ 49 : 13**

**'ನನ್ನ ಪ್ರಾಣ ಯಾರ ವಶದಲ್ಲಿದೆಯೋ ಅವನಾಣೆಗೂ ಸತ್ಯ. ತಾನು ಇಷ್ಟಪಡುವುದನ್ನು ತನ್ನ ಸಹೋದರನಿಗೂ ಇಷ್ಟಪಡುವ ತನಕ ನಿಮ್ಮಲ್ಲಾರೂ ಸತ್ಯವಿಶ್ವಾಸಿಯಾಗಲಾರರು**

**- ಪ್ರವಾದಿ ಮುಹಮ್ಮದ್ (ಸ)**

**ನೆರೆಹೊರೆಯ ಸಂಬಂಧ ಕುರಿತು ಇಸ್ಲಾಮ್ ಏನು ಹೇಳುತ್ತದೆ?**

**'ನೀವು ಪದಾರ್ಥ ಸಿದ್ಧಪಡಿಸುವಾಗ ಅದಕ್ಕೆ ಸ್ವಲ್ಪ ನೀರು ಬೆರೆಸಿ ಹೆಚ್ಚಿಸಿಕೊಂಡಾದರೂ ನೆರೆಮನೆಯವನಿಗೆ ಕೊಡಿರಿ.'**

**'ನಿನ್ನ ನೆರೆಹೊರೆಯವರು ನೀನೋರ್ವ ಉತ್ತಮ ವ್ಯಕ್ತಿಯೆಂದು ಹೇಳುವುದನ್ನು ಆಲಿಸಿದರೆ ನೀನು ಉತ್ತಮ ವ್ಯಕ್ತಿಯಾಗಿರುವಿ ಎಂದು ತಿಳಿದುಕೊಳ್ಳು. ಅವರು ನೀನು ಕೆಟ್ಟ ವ್ಯಕ್ತಿಯೆಂದು ಹೇಳಿದರೆ ನೀನು ಕೆಟ್ಟವನೆಂದು ತಿಳಿದುಕೊಳ್ಳು.'**

**- ಪ್ರವಾದಿ ಮುಹಮ್ಮದ್ (ಸ)**

ಇಸ್ಲಾಮ್ ಕುಟುಂಬ ಸಂಬಂಧದಂತೆ ನೆರೆಹೊರೆಯವರ ನಡುವೆಯೂ ಪರಸ್ಪರ ಒಂದು ಸಂಬಂಧವಿದೆಯೆಂದು ಪರಿಗಣಿಸುತ್ತದೆ. ಪ್ರವಾದಿ (ಸ) ಯವರು ನೆರೆಹೊರೆಯವರಿಗೆ ಕಿರುಕುಳ ಕೊಡದೆ ಅವರೊಂದಿಗೆ ಉತ್ತಮ ರೀತಿಯಲ್ಲಿ ವರ್ತಿಸಬೇಕೆಂದು ಉಪದೇಶಿಸಿರುವರು. ಒಬ್ಬನ ವ್ಯಕ್ತಿತ್ವದ ಕುರಿತು ನೆರೆಮನೆಯವರು ಏನು ಹೇಳುತ್ತಾರೆಂದು ನೋಡಬೇಕೆಂದು ಅವರು ಕಲಿಸಿದ್ದಾರೆ. ನರೆಹೊರೆಯವನು ಹಸಿದಿರುವಾಗ ಹೊಟ್ಟೆ ತುಂಬಾ ಉಣ್ಣುವವನು ಸತ್ಯವಿಶ್ವಾಸಿಯಲ್ಲ ಹಾಗೂ ಮನೆಯಲ್ಲಿ ಪದಾರ್ಥ ಸಿದ್ಧಪಡಿಸುವಾಗ ಅದಕ್ಕೆ ಸ್ವಲ್ಪ ನೀರು ಬೆರೆಸುವ ಮೂಲಕ ಹೆಚ್ಚಿಸಿಕೊಂಡಾದರೂ ನೆರೆಮನೆಯವನಿಗೆ ನೀಡಬೇಕೆಂದು ಪ್ರವಾದಿ (ಸ)ಯವರ ಉಪದೇಶದಿಂದ ನೆರೆಹೊರೆಯ ನಿವಾಸಿಗಳ ನಡುವಿನ ಪರಸ್ಪರ ಬಾಧ್ಯತೆ ಅದೆಷ್ಟು ಹಿರಿದಾಗಿದೆಯೆಂದು ಸ್ಪಷ್ಟವಾಗುತ್ತದೆ.

**ಮುಸ್ಲಿಮನೋರ್ವ ಕೋಮುವಾದಿಯಾಗಲು ಸಾಧ್ಯವೇ?**

ಇಸ್ಲಾಮ್ ಜನ್ಮವಲ್ಲ, ಪರಂತು ಪ್ರತಿಯೋರ್ವನ ಕರ್ಮವೇ ಅವನ ಮಹತ್ವವನ್ನು ನಿಶ್ಚಯಿಸುತ್ತದೆಯೆಂದು ಕಲಿಸುವ ಧರ್ಮವಾಗಿದೆ. ಇಸ್ಲಾಮ್ 'ಏಕೈಕ ದೇವ ಮತ್ತು ಒಂದೇ ಜನಾಂಗ ಎಂಬ ಘೋಷಾವಾಕ್ಯದ ಮೂಲಕ ವರ್ಗ, ವರ್ಣ, ವಂಶ, ಜಾತಿ ಮೊದಲಾದ ಜನ್ಮದ ಆಧಾರದಲ್ಲಿರುವ ಎಲ್ಲಾ ವಿಧದ ಸಂಕುಚಿತ ವಾದಗಳನ್ನು ಬೇರು ಸಮೇತ ಕಿತ್ತೊಗೆಯುತ್ತದೆ. 'ಕೋಮುವಾದದೆಡೆಗೆ ಆಹ್ವಾನಿಸುವವನು, ಕೋಮುವಾದಕ್ಕಾಗಿ ಯುದ್ಧಮಾಡುವವನು, ಕೋಮುವಾದಕ್ಕಾಗಿ ಮಡಿಯುವವನು ನಮ್ಮವನಲ್ಲ' ಎಂದು ಅಸಂದಿಗ್ಧವಾಗಿ ಸಾರಿದ ಪ್ರವಾದಿ (ಸ)ಯವರ ಅನುಯಾಯಿಗಳು ಯಾವತ್ತೂ ಕೋಮುವಾದಿಗಳಾಗಲಾರರು.

'ಅಕ್ರಮ ದಾಸ್ತಾನಿಡುವವನು ಪಾಪಿಯಾಗಿದ್ದಾನೆ' ಹೆಚ್ಚಿನ ಬೆಲೆಗೆ ಮಾರಲು ದಾನ್ಯವನ್ನು ಅಕ್ರಮ ದಾಸ್ತಾನಿಟ್ಟುಕೊಳ್ಳುವವನು ಅಪರಾಧಿಯಾಗಿದ್ದಾನೆ.

'ಕ್ರಯ-ವಿಕ್ರಯ ಹಾಗೂ ಸಾಲವನ್ನು ಹಿಂತಿರುಗಿಸುವಂತೆ ಕೇಳುವಾಗ ಸೌಮ್ಯವಾಗಿ ವರ್ತಿಸುವವನ ಮೇಲೆ ಅಲ್ಲಾಹನು ಕರುಣೆಯನ್ನು ವರ್ಷಿಸಲಿ. ಬಡ್ಡಿಗೆ ಹಣ ಕೊಡುವವನು ಹಾಗೂ ಬಡ್ಡಿಗೆ ಸಾಕ್ಷಿ ನಿಲ್ಲುವವನ ಮೇಲೆ ಅಲ್ಲಾಹನ ಶಾಪವಿರಲಿ.'

ಪ್ರಾಮಾಣಿಕ ವ್ಯಾಪಾರಿ ಅಂತ್ಯದಿನದಂದು ಪ್ರವಾದಿಗಳು, ನ್ಯಾಯಪಾಲಕರು, ಹುತಾತ್ಮರು ಹಾಗೂ ಸಜ್ಜನರ ಜತೆಯಲ್ಲಿರುವರು. ಮಾರಾಟ ಮಾಡುವಾಗ ಸರಿಯಾಗಿ ಅಳೆದು ಕೊಡಿರಿ. ಪಡೆಯುವಾಗ ಸರಿಯಾಗಿ ತೂಕಮಾಡಿ ಪಡೆದುಕೊಳ್ಳಿರಿ.

ಮಾರಾಟ ಸರಕುಗಳ ನ್ಯೂನತೆಗಳನ್ನು ಬಚ್ಚಿಡದಿರಿ. ಹೀಗೆ ಮಾಡಿದರೆ ಆ ವ್ಯವಹಾರ ಅನುವದನೀಯ. ಅನ್ಯಥಾ ಅದು ಮ್ಲೇಚ್ಛ ಕಾರ್ಯವಾಗಿದೆ. ಮೋಸದ ಎಲ್ಲಾ ವ್ಯಾಪಾರಗಳು ವಿರೋಧಿಸಲ್ಪಟ್ಟಿದೆ.

"ಒಬ್ಬನು ಒಂದು ಗೇಣು ಭೂಮಿಯನ್ನು ಅಕ್ರಮವಾಗಿ ವಶಪಡಿಸಿಕೊಂಡರೆ (ಪರಲೋಕದಲ್ಲಿ) ಏಳು ಭೂಮಿಯಿಂದ ಅಷ್ಟು ಪ್ರಮಾಣವನ್ನು ತೆಗೆದುಕೊಂಡು ಆತ ಕೊರಳಿಗೆ ಹಾರವಾಗಿ ತೊಡಿಸಲಾಗುವುದು'

'ಒಬ್ಬನು ಸಂಪಾದಿಸಲಿಕ್ಕಾಗಿ ಬೇಡುವುದಕ್ಕೆ ಇಳಿದರೆ ಅವನು ಬೇಡುವುದು ಬೆಂಕಿಯ ಕೆಂಡವನ್ನಾಗಿದೆ'

' ಒಬ್ಬ ಪ್ರಶಂಸೆಯನ್ನು ಬಯಸಿದರೆ ಅಲ್ಲಾಹನನ್ನು ಅವನನ್ನು ಅಪಕೀರ್ತಿಗೆ ಒಳಪಡಿಸುವನು. ಒಬ್ಬ ಇತರರಿಗೆ ತೋರಿಸುವ ಸಲುವಾಗಿ ಕರ್ಮಗಳನ್ನು ಮಾಡಿದರೆ ಅಲ್ಲಾಹನು ಅವನನ್ನು ಅವನಿಚ್ಛಿಸದ ರೀತಿಯಲ್ಲಿ ತೋರಿಸುವನು'

'ನೀವು ವಿನಾಶಕಾರಿಯಾದ ಏಳು ಪಾಪಗಳನ್ನು ತೊರೆಯಿರಿ. ಅಲ್ಲಾಹನೊಂದಿಗೆ ಭಾಗೀದಾರರನ್ನು ನಿಶ್ಚಯಿಸುವುದು, ಮಾಟ ಮಾಡುವುದು, ಅಲ್ಲಾಹನು ಗೌರವಿಸಿದ ಪ್ರಾಣವನ್ನು, ಅನ್ಯಾಯವಾಗಿ ವಧಿಸುವುದು, ಬಡ್ಡಿ ತಿನ್ನುವುದು, ಅನಾಥರ ಸೊತ್ತನ್ನು ಕಬಳಿಸುವುದು, ಘೋರ ಯುದ್ಧ ನಡೆಯುತ್ತಿರುವಾಗ ರಣರಂಗಕ್ಕೆ ಬೆನ್ನು ತಿರುಗಿಸುವುದು ಪತಿವ್ರತೆಯರಾದ ಶುದ್ಧ ಚಾರಿತ್ರ್ಯದ ಮಹಿಳೆಯರ ಮೇಲೆ ಸುಳ್ಳಾರೋಪ ಹೊರಿಸುವುದು ವರ್ಜಿಸಿರಿ.

- ಪ್ರವಾದಿ ಮುಹಮ್ಮದ್(ಸ)

ಭೂಮಿಯಲ್ಲಿರುವ ಅನುಗ್ರಹಗಳು ಮನುಷ್ಯರಿಗಾಗಿ ಸೃಷ್ಟಿಸಲ್ಪಟ್ಟಿದೆ. ಪ್ರಕೃತಿಯ ಕೊಡುಗೆಗಳನ್ನು ಉಪಯೋಗಿಸುವ ಹಕ್ಕು ಎಲ್ಲರಿಗಿದೆ. ಆದರೆ ಇತರರನ್ನು ಶೋಷಣೆಗೊಳಪಡಿಸಿ ಧನ ಸಂಪಾದಿಸಲಾಗದು. ವ್ಯಾಪಾರ, ಕೃಷಿ, ದುಡಿಮೆ ಮೊದಲಾದ ಮಾರ್ಗಗಳ ಮೂಲಕ ಸಂಪಾದಿಸಬಹುದಾಗಿದೆ. ಆದರೆ ಇಲ್ಲಿ ಪಾಲಿಸಬೇಕಾದ ನೈತಿಕ ನಿಯಮಗಳಿವೆ. ಈ ನೈತಿಕ

ನಿಯಮಗಳನ್ನು ಪಾಲಿಸಿ ಸಂಪಾದಿಸುವ ಸಂಪತ್ತೆಲ್ಲವೂ ಅವರವರಿಗೆ ಸೇರುತ್ತದೆ. ಅದು ಸಮಾಜ ಅಥವಾ ರಾಷ್ಟ್ರದ ಸೊತ್ತಲ್ಲ. ಆದರೆ ಈ ಸಂಪತ್ತಿನಿಂದ ಸಮಾಜ ಮತ್ತು ರಾಷ್ಟ್ರದ ಅವಶ್ಯಕತೆಗಾಗಿ ವೆಚ್ಚ ಮಾಡುವುದು ವ್ಯಕ್ತಿಗಳ ಬಾಧ್ಯತೆಯಾಗಿದೆ.

ಇಸ್ಲಾಮ್ ವ್ಯಾಪಾರವನ್ನು ಅನುಮತಿಸುತ್ತದೆ; ಬಡ್ಡಿಯನ್ನು ವಿರೋಧಿಸುತ್ತದೆ. ಲಾಭವನ್ನು ಅನುಮತಿಸುವ ಇಸ್ಲಾಮ್ ಅಕ್ರಮ ದಾಸ್ತಾನು ಮತ್ತು ಲಾಭ ಕೊಳ್ಳೆ ಹೊಡೆಯುವುದನ್ನು ವಿರೋಧಿಸುತ್ತದೆ. ವ್ಯಾಪಾರದಲ್ಲಿ ಕೃತಿಮತೆ, ಮೋಸ, ಶೋಷಣೆಗಳಿರಬಾರದು. ಉತ್ಪಾದನಾ ರಂಗವು ಶೋಷಣೆಯಿಂದ ಮುಕ್ತವಾಗಿರಬೇಕು. ಉತ್ಪನ್ನದ ಕೊರತೆಗಳನ್ನು ಮರೆಮಾಚಿಟ್ಟುಕೊಂಡು ಅದಕ್ಕೆ ಮಾರುಕಟ್ಟೆ ನಿರ್ಮಿಸಬಾರದು. ಆರ್ಥಿಕ ಸಂಕಷ್ಟಕ್ಕೀಡಾದವರಿಗೆ ಸಮಾಜವು ಸಹಾಯ ಮಾಡಬೇಕಾಗಿದೆ. ಅದಕ್ಕಾಗಿಯೇ ಇಸ್ಲಾಮ್ ಝಕಾತ್ ವ್ಯವಸ್ಥೆಯನ್ನು ಜಾರಿಗೊಳಿಸಿದೆ.

**ಯಜಮಾನ-ಕಾರ್ಮಿಕ ಸಂಬಂಧದ ಕುರಿತು ಇಸ್ಲಾಮ್ ಏನು ಹೇಳುತ್ತದೆ?**

**'ಕಾರ್ಮಿಕನ ಕರಗಳ ದುಡಿತವು ಅತ್ಯುತ್ತಮ ಸಂಪಾದನೆಯಾಗಿದೆ'.**

**'ಅತ್ಯುತ್ತಮ ಆಹಾರ ಸ್ವಂತ ಕರಗಳ ದುಡಿತವಾಗಿದೆ'.**

**ಕಾರ್ಮಿಕನನ್ನು ಅಲ್ಲಾಹನು ಸ್ನೇಹಿತನಂತೆ ನೋಡುತ್ತಾನೆ. ಅಲ್ಲಾಹನು ತನ್ನ ಕಾರ್ಮಿಕ ದಾಸನನ್ನು ಮೆಚ್ಚುತ್ತಾನೆ. ತನ್ನ ಕುಟುಂಬಕ್ಕಾಗಿ ಪರಿಶ್ರಮಪಟ್ಟು ಕೆಲಸ ಮಾಡುವವನು ಪ್ರತಾಪಶಾಲಿಯೂ ಮಹಾಮಹಿಮಾವಂತನೂ ಆದ ಅಲ್ಲಾಹನ ಮಾರ್ಗದಲ್ಲಿ ಸಮರದಲ್ಲಿ ನಿರತನಾದವನಂತಿರುವನು.**

**- ಪ್ರವಾದಿ ಮುಹಮ್ಮದ್ (ಸ)**

ಕೃಷಿ, ಕೈಗಾರಿಕೆ, ವ್ಯಾಪಾರಗಳಿರುವಾಗ ಯಜಮಾನ-ಕಾರ್ಮಿಕರಿರುವುದು ಸ್ವಾಭಾವಿಕವಾಗಿದೆ. ಇಸ್ಲಾಮ್ ಯಜಮಾನ ಮತ್ತು ಕಾರ್ಮಿಕ ಸಂಬಂಧ ಸಂಘರ್ಷಮಯವಾಗಿರದೆ ಸೌಹಾರ್ದವಾಗಿರಬೇಕೆಂದು ಕಲಿಸುತ್ತದೆ. ಪ್ರವಾದಿ (ಸ)ಯವರು ಕಾರ್ಮಿಕನು ತನ್ನ ಕೈಗಳಿಂದ ಮಾಡಿದ ದುಡಿಮೆಯು ಅತ್ಯುತ್ತಮ ಸಂಪಾದನೆಯಾಗಿದೆಯೆಂದು ಹೇಳಿರುವರು. ಕಾರ್ಮಿಕರಿಗೆ ಅರ್ಹವಾದ ಕೂಲಿ ಕೊಡಬೇಕು. ಕೆಲಸವನ್ನು ಆರಂಭಿಸುವುದಕ್ಕಿಂತ ಮೊದಲೇ ಯಜಮಾನ ಮತ್ತು ಕಾರ್ಮಿಕ ಕೂಲಿಯ ಬಗ್ಗೆ ಒಂದು ಒಪ್ಪಂದಕ್ಕೆ ಬರಬೇಕು. ಹೀಗೆ ಒಪ್ಪಂದ ಮಾಡಿಕೊಂಡ ನಂತರ ಕೂಲಿಯಲ್ಲಿ ಸ್ವಲ್ಪವೂ ಕಡಿತಗೊಳಿಸದೆ ಕಾರ್ಮಿಕನ ಬೆವರು ಆರುವುದಕ್ಕಿಂತ ಮೊದಲೇ ಅವನಿಗೆ ಕೊಟ್ಟು ಬಿಡಬೇಕು. ಕಾರ್ಮಿಕನನ್ನು ಶೋಷಿಸಬಾರದು. ಕಾರ್ಮಿಕನಿಗೆ ತನ್ನ ಕೆಲಸದಲ್ಲಿ ಸಂಪೂರ್ಣವಾದ ಆತ್ಮಾರ್ಥತೆಯಿರಬೇಕು. ವಹಿಸಿಕೊಡಲಾದ ಕೆಲಸವನ್ನು ಪ್ರಾಮಾಣಿಕತೆಯಿಂದ ಮಾಡುವುದು ಕಾರ್ಮಿಕನ ಬಾಧ್ಯತೆಯಾಗಿದೆ.

**ಅನ್ಯಮತೀಯರೊಂದಿಗೆ ಮುಸ್ಲಿಮನ ನಿಲುವು ಹೇಗಿರಬೇಕು?**

ಇಸ್ಲಾಮ್ ಇತರ ಧರ್ಮೀಯರೊಂದಿಗೆ ಸಂಪೂರ್ಣ ಸೌಹಾರ್ದತೆ ಮತ್ತು ಸಹಿಷ್ಣುತೆಯಿಂದ ಜೀವಿಸಬೇಕೆಂದು ಕಲಿಸುತ್ತದೆ. ಇಸ್ಲಾಮೇತರ ಸಮುದಾಯಗಳು ಮುಸ್ಲಿಮರ ಅಸ್ತಿತ್ವವನ್ನು ಪ್ರಶ್ನಿಸದಿರುವ ತನಕ ಅವರೊಂದಿಗೆ ಪ್ರೀತಿ ಮತ್ತು ಸಾಮರಸ್ಯದಲ್ಲಿರಬೇಕೆಂದು ಕುರ್‌ಆನ್ ಹೇಳಿದೆ.

ಪ್ರವಾದಿ ಮುಹಮ್ಮದ್ (ಸ)ರು ತಮ್ಮ ಜೀವನದ ಮೂಲಕ ಇದನ್ನು ಪ್ರಾಯೋಗಿಕವಾಗಿ ತೋರಿಸಿಕೊಟ್ಟಿದ್ದಾರೆ. ಇಸ್ಲಾಮಿ ರಾಷ್ಟ್ರಗಳಲ್ಲಿ ವಾಸಿಸುತ್ತಿರುವ ಅಮುಸ್ಲಿಮರ ವಿಶ್ವಾಸ ಸ್ವಾತಂತ್ರ್ಯ ಹಾಗೂ ಆರಾಧನಾ ಸ್ವಾತಂತ್ರ್ಯಕ್ಕೆ ಘಾಸಿಯುಂಟುಮಾಡುವ ಹಕ್ಕು ಖಲೀಫರಿಗೂ ಇಲ್ಲ. ಅವರ ಪ್ರಾಣ ಮತ್ತು ಸೊತ್ತಿನ ಸಂರಕ್ಷಣೆಯ ಸಂಪೂರ್ಣ ಹೊಣೆ ಇಸ್ಲಾಮಿ ರಾಷ್ಟ್ರದ ಮೇಲಿದೆ. ಪ್ರವಾದಿಯವರು ಮುಸ್ಲಿಮೇತರ ಪ್ರಜೆಗಳೊಂದಿಗೆ ಅನ್ಯಾಯವೆಸಗುವುದು ಅಕ್ಷಮ್ಯ ಅಪರಾಧವೆಂದು ಹೇಳಿರುವರು.

**ಪ್ರವಾದಿ (ಸ) ಹೇಳುತ್ತಾರೆ : ನಿನ್ನ ಸಹೋದರ ಅಕ್ರಮಿಯಾದರೂ, ಅಕ್ರಮಕ್ಕೆ ಗುರಿಯಾದರೂ ನೀನು ಅವನಿಗೆ ಸಹಕರಿಸು. ಇದನ್ನು ಆಲಿಸಿ ಒಬ್ಬರು ಹೇಳಿದರು : ಓ ಸಂದೇಶವಾಹಕರೇ, ಸಹೋದರನು ಅಕ್ರಮಕ್ಕೀಡಾದರೆ ಸಹಾಯ ಮಾಡಬೇಕೆಂದು ನನಗೆ ತಿಳಿದಿದೆ. ಆದರೆ ಅವನು ಅಕ್ರಮಿಯಾದರೆ ಸಹಕರಿಸುವುದೆಂತು? ಪ್ರವಾದಿ (ಸ) ಹೇಳಿದರು : ನೀನು ಅವನನ್ನು ಅಕ್ರಮದಿಂದ ತಡೆಯಬೇಕು. ಈ ಮೂಲಕ ನೀನು ಅವನಿಗೆ ಸಹಕರಿಸುವಿ.**

**- ಪ್ರವಾದಿ ಮುಹಮ್ಮದ್ (ಸ)**

**ಜಿಹಾದ್ ಎಂದರೇನು?**

ಜಿಹಾದ್ ಎಂಬ ಪದಕ್ಕೆ ತ್ಯಾಗ, ಪರಿಶ್ರಮ ಎಂಬ ಅರ್ಥಗಳಿವೆ. ದೇವಮಾರ್ಗದಲ್ಲಿರುವ ತ್ಯಾಗ, ಪರಿಶ್ರಮಗಳೆಲ್ಲವೂ ಜಿಹಾದ್ ಆಗಿದೆ. ದೇಹೇಚ್ಛೆಗಳನ್ನು ದೇವೇಚ್ಛೆಯ ಅಧೀನಕ್ಕೊಪ್ಪಿಸುವುದು ಜಿಹಾದ್‌ನ ಮೊದಲ ಹಂತವಾಗಿದೆ. ಸ್ವಂತ ಜೀವನವನ್ನು ಆದರ್ಶನೀಯ ರೀತಿಗೆ ಬದಲಾಯಿಸಿಕೊಳ್ಳುವುದು. ಜಿಹಾದ್ ಆಗಿದೆ. ದೇವಮಾರ್ಗದಲ್ಲಿ ಸೊತ್ತು ಮತ್ತು ದೇಹವನ್ನು ವಿನಿಯೋಗಿಸುವುದು ಕೂಡಾ ಜಿಹಾದ್ ಆಗಿದೆ.

**'ನಿಮ್ಮೊಡನೆ ಯುದ್ಧ ಮಾಡುವವರಿಗೆದುರು ಅಲ್ಲಾಹನ ಮಾರ್ಗದಲ್ಲಿ ನೀವೂ ಸಹ ಯುದ್ಧ ಮಾಡಿರಿ. ಆದರೆ ಅತಿಕ್ರಮ ಸಲ್ಲದು. ನಿಶ್ಚಯವಾಗಿಯೂ ಅತಿಕ್ರಮಿಗಳನ್ನು ಅಲ್ಲಾಹನು ಇಷ್ಟಪಡುವುದಿಲ್ಲ'.**

**ಪವಿತ್ರ ಕುರ್‌ಆನ್ 2=196**

ಸತ್ಯಧರ್ಮದ ಸಾಕ್ಷ್ಯವನ್ನು ಸ್ವೀಕರಿಸಿ ಇಸ್ಲಾಮಿ ಸಮಾಜದ ಸದಸ್ಯನಾಗುವ ವ್ಯಕ್ತಿಗೆ ಆರಾಧನೆಗಳು ಕಡ್ಡಾಯವಾಗುವಂತೆ ಈ ಧರ್ಮದ ಸಂದೇಶವನ್ನು ಸಹೋದರರಿಗೆ ತಲುಪಿಸುವುದು. ಕೂಡಾ ಬಾಧ್ಯತೆಯಾಗುತ್ತದೆ. ಈ ಬಾಧ್ಯತೆಯನ್ನು ನಿರ್ವಹಿಸುವ ಪಥದಲ್ಲಿ ಮಾಡುವ ತ್ಯಾಗ ಮತ್ತು ಪರಿಶ್ರಮಗಳು ಜಿಹಾದ್ ಆಗಿದೆ. ಸ್ವಂತ ಜೀವನವನ್ನು ಸತ್ಯಧರ್ಮದ ಸಾಕ್ಷ್ಯವನ್ನಾಗಿ ಮಾಡಿಕೊಂಡು ಯುಕ್ತಿ, ಸದುಪದೇಶ ಮತ್ತು ಸ್ನೇಹ ಸಂವಾದಗಳ ಮೂಲಕ ಅದರ ಸಂದೇಶವನ್ನು ಇತರರಿಗೆ ತಲುಪಿಸಬೇಕಾಗಿದೆ. ಬಲಾತ್ಕಾರದ ಪರಿವರ್ತನೆಗೆ ಇಸ್ಲಾಮಿನಲ್ಲಿ ಅವಕಾಶವಿಲ್ಲ. ಪವಿತ್ರ ಕುರ್‌ಆನ್ ಧರ್ಮದಲ್ಲಿ ಬಲಾತ್ಕಾರ-ಸಲ್ಲದೆಂದು ಸಾರಿ; ಮಾನಸಿಕ ಸಮಾಧಾನದಿಂದ ವಿಶ್ವಾಸವನ್ನು ಸ್ವೀಕರಿಸುವಂತೆ ಜನರಿಗೆ ಉಪದೇಶಿಸುವುದು ಮಾತ್ರ ಸತ್ಯವಿಶ್ವಾಸಿಗಳ ಕರ್ತವ್ಯವಾಗಿದೆಯೆಂದು ಸ್ಪಷ್ಟಪಡಿಸಿದೆ. ಧರ್ಮದ ಹೆಸರಲ್ಲಿ ನಿರಪರಾಧಿಗಳ ಮೇಲೆ ಆಕ್ರಮಣ ನಡೆಸುವುದನ್ನು ಇಸ್ಲಾಮ್ ಒಪ್ಪುವುದಿಲ್ಲ.

ಇಸ್ಲಾಮಿನ ಪ್ರಕಾರ ಜೀವಿಸುವ ಹಕ್ಕು ಹಾಗೂ ಅದನ್ನು ಪ್ರಚುರಪಡಿಸುವ ಸ್ವಾತಂತ್ರ್ಯ ನಿರಾಕರಿಸಲ್ಪಟ್ಟಾಗ ಅನಿವಾರ್ಯವಾದರೆ ಬಲಪ್ರಯೋಗಿಸಿ ಈ ಹಕ್ಕು ಮತ್ತು ಸ್ವಾತಂತ್ರ್ಯವನ್ನು ಖಚಿತಪಡಿಸಿಕೊಳ್ಳಬಹುದು ಎನ್ನುವುದು ಇಸ್ಲಾಮಿನ ನಿಲುವಾಗಿದೆ. ಅಕ್ರಮವು ತೊಲಗಿ ಶಾಂತಿಯ ಸಂಸ್ಥಾಪನೆಗಾಗಿ ಇಸ್ಲಾಮಿನಲ್ಲಿ ಯುದ್ಧಕ್ಕೆ ಅನುಮತಿಯಿದೆ. ಯುದ್ಧದಲ್ಲಿ ಕೂಡಾ ಮೇರೆ ಮೀರದೆ ಶಿಷ್ಟಾಚಾರಗಳನ್ನು ಪಾಲಿಸಬೇಕೆಂದು ಇಸ್ಲಾಮ್ ಆದೇಶಿಸಿದೆ. ಮುಸ್ಲಿಮ್ ಸಮುದಾಯವು ಯುದ್ಧ ಮಾಡಲು ಅನಿವಾರ್ಯವಾದ ಪರಿಸ್ಥಿತಿ ಏರ್ಪಟ್ಟರೆ ಸಾಮರ್ಥ್ಯ ಹಾಗೂ ಆರೋಗ್ಯವಿರುವವರೆಲ್ಲ ಅದಕ್ಕೆ ಸಿದ್ಧರಾಗಬೇಕಾಗಿದೆ. ಸತ್ಯಧರ್ಮದ ಸಂರಕ್ಷಣೆಗಾಗಿ ಮಾಡುವ ತ್ಯಾಗ ಪರಿಶ್ರಮಗಳೆಲ್ಲವೂ ಜಿಹಾದ್‌ನ ವ್ಯಾಪ್ತಿಗೆ ಬರುತ್ತದೆ. ಅದರಲ್ಲಿ ಕೊನೆಯದು ಸಶಸ್ತ್ರ ಯುದ್ಧವಾಗಿದೆ.

**'ಧರ್ಮ ಸಂಬಂಧವಾಗಿ ನಿಮ್ಮೊಡನೆ ಯುದ್ಧ ಮಾಡದ ಹಾಗೂ ನಿಮ್ಮ ಮನೆಗಳಿಂದ ನಿಮ್ಮನ್ನು ಹೊರತಳ್ಳದವರೊಂದಿಗೆ ನೀವು ಕರುಣೆ ತೋರುವುದರಿಂದಲೂ ಅವರೊಡನೆ ನ್ಯಾಯದಿಂದ ವರ್ತಿಸುವುದರಿಂದಲೂ ಅಲ್ಲಾಹನು ನಿಮ್ಮನ್ನು ತಡೆಯುವುದಿಲ್ಲ. ಅಲ್ಲಾಹನು ನ್ಯಾಯಪಾಲಿಸುವವರನ್ನು ಪ್ರೀತಿಸುತ್ತಾನೆ'.**

**ಪವಿತ್ರ ಕುರ್‌ಆನ್ 60 : 8)**

**ಇಸ್ಲಾಮ್ ಲೋಕದಲ್ಲಿ ಹೇಗೆ ವ್ಯಾಪಿಸಿತು?**

ಸೃಷ್ಟಿಕರ್ತನಾದ ಏಕದೇವನನ್ನು ಮಾತ್ರ ಆರಾಧಿಸಬೇಕು ಹಾಗೂ ಆತನ ಸಂದೇಶವಾಹಕರನ್ನು ಅನುಸರಿಸಬೇಕೆಂಬ ಉದಾತ್ತ ಆದರ್ಶದೆಡೆಗೆ ವಿಚಾರಶೀಲರು ಆಕರ್ಷಿತರಾದದ್ದೇ ಇಸ್ಲಾಮ್ ಅತ್ಯಂತ ಶೀಘ್ರವಾಗಿ ಪಸರಿಸಲು ಪ್ರಮುಖ ಕಾರಣವಾಗಿದೆ. ನಕಲಿ ದೇವರುಗಳು ಹಾಗೂ ಅವುಗಳ ದಳ್ಳಾಳಿಗಳಾದ ಪುರೋಹಿತರು ಬಂಧನದಲ್ಲಿಟ್ಟ ಮಾನವನ ಬೌದ್ಧಿಕತೆಯನ್ನು ಕಾರ್ಯೋನ್ಮುಖಗೊಳಿಸುವ ದೇವಸ್ಮರಣೆಯ ಪಥದೆಡೆಗೆ ವಿಚಾರಶೀಲರು ಆಕರ್ಷಿತರಾಗಿದ್ದು ತೀರಾ ಸ್ವಾಭಾವಿಕವಾಗಿತ್ತು. ದೇವನ ಏಕತೆಯೊಂದಿಗೆ ಇಸ್ಲಾಮ್ ಮುಂದಿಟ್ಟ ಮಾನವ ಜನಾಂಗದ ಏಕತೆಯೆಂಬ ಆಶಯವು ಜನ್ಮದ ಹೆಸರಲ್ಲಿ ನಿರ್ಮಿಸಲ್ಪಟ್ಟ ಎಲ್ಲಾ ಸಂಕುಚಿತತೆಗಳನ್ನು ಮೂಲೋತ್ಪಾಟನೆಗೊಳಿಸಿತು. ಜಾತಿ ಮತ್ತು ವರ್ಗದ ಹೆಸರಲ್ಲಿ ದಮನಿಸಲ್ಪಟ್ಟಿದ್ದ ಜನತೆ ಮಾನವ ಏಕತೆಯ ಸಂದೇಶವನ್ನು ಅಪ್ಪಿಕೊಂಡಿದ್ದು ಕೂಡಾ ಇಸ್ಲಾಮ್ ವ್ಯಾಪಿಸಲು ಕಾರಣವಾಗಿದೆ. ವ್ಯಾಪಾರ ನಿಮಿತ್ತ ಲೋಕದ ವಿವಿದೆಡೆಗಳಿಗೆ ತೆರಳಿದ ಮುಸ್ಲಿಮರ ನಿಸ್ವಾರ್ಥ ಮತ್ತು ಆತ್ಮಾರ್ಥವಾದ ಜೀವನವು ಕೂಡಾ ಅಲ್ಲಿಯ ನಿವಾಸಿಗಳನ್ನು ಇಸ್ಲಾಮಿನೆಡೆಗೆ ಸೆಳೆಯುವ ನಿಟ್ಟಿನಲ್ಲಿ ಮಹತ್ವದ ಪಾತ್ರ ವಹಿಸಿದೆ. ಹೀಗೆ ವಿವಿಧ ಮಾರ್ಗಗಳ ಮೂಲಕ ಜನರ ಮನಸ್ಸಿನಲ್ಲಿ ನೆಲೆಯೂರಿದ ಇಸ್ಲಾಮ್ ಇಂದು ಜಗತ್ತಿನ ಎಲ್ಲಾ ಭೂಖಂಡದಲ್ಲಿರುವ ಕೋಟ್ಯಾಂತರ ಜನರ ಚಿಂತನೆ ಆದರ್ಶ ಹಾಗೂ ಕಾರ್ಯ ಶೈಲಿಯ ಮೇಲೆ ಪ್ರಭಾವ ಬೀರುತ್ತಿರುವ ಆದರ್ಶವಾಗಿದೆ.

"ನಿನ್ನ ಮೂಲಕ ಒಬ್ಬನು ಸತ್ಯಮಾರ್ಗವನ್ನು ಸ್ವೀಕರಿಸಿದರೆ,
ಅದು ನಿನ್ನ ಮಟ್ಟಿಗೆ ಈ ಲೋಕ ಮತ್ತು ಅದರಲ್ಲಿರುವ
ಎಲ್ಲಾ ವಸ್ತುಗಳಿಗಿಂತಲೂ ಉತ್ತಮ"

– ಪ್ರವಾದಿ ಮುಹಮ್ಮದ್ (ಸ)

ಪ್ರಕಾಶಕರು

خيركم من تعلم القرآن و علمه

ದಾವಾ ಪಬ್ಲಿಕೇಶನ್ಸ್

(ಜಮೀಯತೇ ಅಹ್ಲೆ ಹದೀಸ್ ಕರ್ನಾಟಕ–ಗೋವಾ ಇದರ ಅಧೀನ ಸಂಸ್ಥೆ)

ಹಿರಾ ಕಾಂಪ್ಲೆಕ್ಸ್, 2–184/11, 2ನೇ ಬ್ಲಾಕ್,
ಕಾಟಿಪಳ್ಳ, ಮಂಗಳೂರು – 575 030
ಮೊಬೈಲ್ : 9986282449
*E-mail : asshahadat@yahoo.co.in*

₹. 10/–